# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಯಾವುದನ್ನು ಕಲಿಯಬೇಕಾದರೂ ಮನಃಪೂರ್ವಕವಾದ ಆಸಕ್ತಿ ಬಹುಮುಖ್ಯ. ಒಬ್ಬೊಬ್ಬರಿಗೆ ಒಂದೊಂದು ವಿಷಯದ ಮೇಲೆ ಆಸಕ್ತಿ ಇರುತ್ತದೆ, ಅದನ್ನು ಗಮನಿಸದೆ ಒಂದೇ ವಿಷಯವನ್ನು ಕಲಿಯುವಂತೆ ಒತ್ತಾಯ ಮಾಡಿದರೆ ಅದು ಮಿದುಳಿಗೆ ಹತ್ತಿಕೊಳ್ಳಲಾರದು, ಆ ವಿಷಯದಲ್ಲಿ ವಯಸ್ಸಿನ ನಿರ್ಬಂಧವೂ ಇಲ್ಲ, ಮನಃಪೂರ್ವಕವಾದ ಆಸಕ್ತಿ ಹುಟ್ಟಿಬಿಟ್ಟರೆ ಯಾವ ವಯಸ್ಸಿನಲ್ಲಾದರೂ ಕಲಿತುಬಿಡಬಹುದೆಂಬುದನ್ನು ಈ ಸಂಚಿಕೆಯ "ಗುರುಶಿಷ್ಯರು" ಎಂಬ ಕಥೆ ನಿರೂಪಿಸುತ್ತದೆ.

## ಅಮರವಾಣಿ

ಗುಣಿನ್ಯುಪಕೃತಿಃ ಸ್ವಲ್ಪಾ ಗಿರಿವದ್ಬಹುಮನ್ಯತೇ,
ಗುಣ ಹೀನೇ ತು ಗಿರಿವತ್ ಕೃತಾಪಿ ಲಘುತಾಂ ವ್ರಜೇತ್

ಗುಣವಂತನಿಗೆ ಚಿಕ್ಕ ಉಪಕಾರ ಮಾಡಿದರೆ ಅದನ್ನು ಗುಡ್ಡದಂತೆ ಹೇಳಿಕೊಳ್ಳುವನು. ಗುಣಹೀನನಿಗೆ ಗುಡ್ಡದಷ್ಟು ಉಪಕಾರ ಮಾಡಿದರೂ, ಅದು ಬಹು ಸಣ್ಣದೆಂದು ಭಾವಿಸುವನು.

---

ಸಂಪುಟ : ೭೪ ಮೇ '೮೫ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



## ಚಂದಮಾಮನ ಹರಟೆ



### ಇಂದಿರಾಗಾಂಧಿಯ ವಿಗ್ರಹ

ಅಮೆರಿಕಾದಲ್ಲಿರುವ 'ಲಿಬರ್ಟೀ' ವಿಗ್ರಹದ ಹಾಗೆ ಬೊಂಬಾಯಿಯ ಸಮೀಪ ಸಮುದ್ರದ ಪ್ರಾಂತದಲ್ಲಿ ಬೃಹ್ಮಾಂಡವಾದ ಇಂದಿರಾಗಾಂಧಿಯ ವಿಗ್ರಹವನ್ನು ಪ್ರತಿಷ್ಠಿಸಲು ಪ್ರಯತ್ನಗಳು ನಡೆಯುತ್ತಿವೆ. ಕೆಲಮಂದಿ ಪಾರಿಶ್ರಾಮಿಕರು ಈ ಕೆಲಸವನ್ನು ಪ್ರಾರಂಭಿಸಿದ್ದಾರೆ.

### ಎಂಬತ್ತೈದು ವರ್ಷಗಳ ಯುವಕ!



ಉತ್ತರ ಕೆನ್ಯಾದ ಮಾರ್ಜಿಯಾ ಕಿಟೋಕ್ಸ್ಟಾ ಎಂಬ ಎಂಬತ್ತೈದು ವರ್ಷ ಪ್ರಾಯದ ವೃದ್ಧನು ಪಶುಗಳನ್ನು ಕಾಯುತ್ತಿರಲು, ಭಯಂಕರವಾದ ಕಾಡು ಕೋಣ ಅವನ ಮೇಲೆ ಧುಮುಕಿತು. ಅವನು ಸ್ವಲ್ಪವೂ ಹೆದರದೆ ಆ ಮೃಗದ ಕೊಂಬುಗಳನ್ನು ಬಿಗಿಯಾಗಿ ಹಿಡಿದು, ಅದರೊಂದಿಗೆ ಒಂದು ಗಂಟೆ ಹೊತ್ತು ಹೋರಾಡಿದನು. ಕಡೆಗೆ ಆ ಕೋಣ ಬಹಳ ಪ್ರಯತ್ನ ಪಟ್ಟು ಅವನಿಂದ ತಪ್ಪಿಸಿಕೊಂಡು ಅಡವಿಯೊಳಗೆ ಓಡಿಹೋಯಿತು.



### ಅಂತರ್ದೇಶೀಯ ಬೌದ್ಧ ಪ್ರದರ್ಶನ ಶಾಲೆ

ಗೌತಮ ಬುದ್ಧನ ಜೀವಿತವನ್ನೂ ಬೋಧನೆಗಳನ್ನೂ ವಿಶದೀಕರಿಸುವ ಬೃಹ್ಮಾಂಡವಾದ ಪ್ರದರ್ಶನ ಶಾಲೆಯನ್ನು, ಬುದ್ಧನ ಜನ್ಮಸ್ಥಳವಾದ ಲುಂಬಿನೀ ವನದಲ್ಲಿ ನೆಲೆ ನಿಲ್ಲಿಸುತ್ತಿದ್ದಾರೆ. ಭಾರತ–ನೇಪಾಳ ಸರಿಹದ್ದಿನಲ್ಲಿ ರೂಪಿಸಲ್ಪಡುವ ಈ ಪ್ರದರ್ಶನ ಶಾಲೆಯ ನಿರ್ಮಾಣಕ್ಕೆ ಭಾರತ ದೇಶವು ನೂರು ಕೋಟಿ ರೂಪಾಯಿ ಕೊಡುತ್ತದೆ.

## ನಿಮಗೆ ಗೊತ್ತೇ?

೧. ಚಂದ್ರಗುಪ್ತ ಮೌರ್ಯನ ಆಸ್ಥಾನವನ್ನು ಅಲಂಕರಿಸಿದ ಗ್ರೀಕು ರಾಯಭಾರಿ ಯಾರೆಂದು ನಿಮಗೆ ಗೊತ್ತೇ ?

೨. ಪ್ಲಾಸೀ ಯುದ್ಧವು ಯಾವಾಗ, ಯಾರ ನಡುವೆ ನಡೆಯಿತು ?

೩. 'ಗೇಟ್ ವೇ ಆಫ್ ಇಂಡಿಯಾ' ಯಾರ ಗೌರವಾರ್ಥವಾಗಿ ನಿರ್ಮಿಸಲ್ಪಟ್ಟಿತೆಂದು ತಿಳಿದಿದೆಯೇ ?

೪. ಮಹಾ ರಾಣಾಪ್ರತಾಪನ ಕುದುರೆಯ ಹೆಸರೇ ನೆಂದು ನಿಮಗೆ ಗೊತ್ತಿದೆಯೇ ?

೫. ಪ್ರಪಂಚದಲ್ಲಿ ಅತಿ ಪ್ರಾಚೀನವಾದ ಪ್ರಜಾ ಸ್ವಾಮ್ಯ ದೇಶವು ಯಾವುದು ?

(ಉತ್ತರ ೬೪ ನೇ ಪುಟದಲ್ಲಿ)



# ಗುರು ಶಿಷ್ಯರು

ಒಂದು ಊರಿನಲ್ಲಿ ಸುಬ್ಬನೆಂಬ ಹುಡುಗನಿದ್ದನು. ತಂದೆ ಎಷ್ಟು ಪ್ರಯತ್ನಪಟ್ಟರೂ ಅವನಿಗೆ ಓದು ಬರೆಹ ಹತ್ತಲೇ ಇಲ್ಲ. ಆ ಊರಿಗೆ ಹೊಸತಾಗಿ ಒಬ್ಬರು ಗುರುಗಳು ಬಂದಿರುವುದನ್ನು ತಿಳಿದ ತಂದೆ, ಸುಬ್ಬನನ್ನು ಆ ಗುರುಗಳ ಬಳಿಗೆ ಕರೆದೊಯ್ದು, "ಈ ನನ್ನ ಮಗನು ಯಾಕೋ ಬಹಳ ದಡ್ಡನಾಗಿದ್ದಾನೆ. ಇವನಿಗೆ ಅಕ್ಷರ ಜ್ಞಾನ, ಪ್ರಪಂಚಜ್ಞಾನ ನೀವೇ ಕಲಿಸಿಕೊಡಬೇಕು. ಈ ದಡ್ಡ ಹುಡುಗನನ್ನು ಮನುಷ್ಯನನ್ನಾಗಿ ಮಾಡುವುದು ನಿಮ್ಮ ಭಾರ" ಎಂದನು.

"ನನ್ನ ಹತ್ತಿರವಿದ್ದು, ಒಂದು ವರ್ಷ ಶುಶ್ರೂಷೆ ಮಾಡಿದವನಿಗೆ ಓದುಬರೆಹ ಅಂಟಿಕೊಳ್ಳದೆ ಹೋಗುವುದಿಲ್ಲ. ನನ್ನ ಮೇಲೆ ನಂಬುಗೆ ಇಟ್ಟು, ಇವನನ್ನು ನನ್ನ ಮನೆಯಲ್ಲಿಯೇ ಬಿಟ್ಟು ಹೋಗು" ಎಂದರು ಗುರುಗಳು.

ಗುರುಗಳ ಮನೆ ಸೇರಿದ ಸುಬ್ಬನಿಗೆ ಮರುದಿನ, ಮನೆಗೆಲಸ ಪೂರಾ ಮಾಡಲು ಹೇಳಿದರು. ಹಟ್ಟಿಯಲ್ಲಿ ನಾಲ್ಕು ಎಮ್ಮೆಗಳಿದ್ದುವು. ಅವನು ಅವುಗಳನ್ನು ಊರ ಹೊರಗೆ ಹೊಡೆದುಕೊಂಡು ಹೋಗಿ ಮೇಯಿಸಿಕೊಂಡು ಬರಬೇಕು. ಹಟ್ಟಿಯನ್ನು ಗುಡಿಸಿ ತೊಳೆದು ಶುಭ್ರಪಡಿಸಬೇಕು. ಸೆಗಣಿಯನ್ನು ಸೇರಿಸಿ ಬೆರಣಿ ತಟ್ಟಬೇಕು. ಗುರುಗಳ ಮನೆಯೊಳಗಿನ ಮುಸುರೆ ಪಾತ್ರೆಗಳನ್ನು ತಿಕ್ಕಬೇಕು, ತೊಳೆಯಬೇಕು.

ಸುಬ್ಬನು ಈ ಕೆಲಸಗಳನ್ನೆಲ್ಲಾ ಬಹಳ ಶ್ರದ್ಧೆಯಿಂದ ಮಾಡಿದನು. ಮೊದಲನೇ ದಿನ ಮುಗಿದ ಮೇಲೆ ಗುರುಗಳು ಅವನನ್ನು ಕರೆದು, "ಏನೋ, ಸುಬ್ಬಾ, ದಿನವಿಡೀ ಬಿಡುವಿಲ್ಲದಂತೆ ಕೆಲಸ ಮಾಡುವಿ. ಅವುಗಳಲ್ಲಿ ನಿನಗೆ ಇಷ್ಟವಿಲ್ಲದ ಕೆಲಸ ಯಾವುದೆಂದು ಹೇಳು. ಆ ಕೆಲಸ ನೀನು ಮಾಡಬೇಕಾಗಿಲ್ಲ. ಆ ಸಮಯದಲ್ಲಿ ನಿನಗೆ ಓದುವುದನ್ನೂ ಬರೆಯುವುದನ್ನೂ ಕಲಿಸುತ್ತೇನೆ" ಎಂದರು.

ಓದುವಾಗ ಕಷ್ಟಪಟ್ಟು ಕೆಲಸಮಾಡುವ ಅಗತ್ಯವೇನಿಲ್ಲ. ಹಾಯಾಗಿ ಒಂದು ಮೂಲೆಯಲ್ಲಿ ಕುಳಿತುಕೊಂಡು ಗುರುಗಳು ಹೇಳುವುದನ್ನು ಕೇಳಿಕೊಂಡಿದ್ದರಾಯಿತು. ಆದುದರಿಂದ ಸುಬ್ಬನ ದೃಷ್ಟಿ ಓದಿನ ಮೇಲೆ ತಿರುಗೀತೆಂದು ಗುರುಗಳು ಅಂದುಕೊಂಡರು. ಆದರೆ ಸುಬ್ಬನು ತನಗೆ ಕೆಲಸ ಮಾಡುವುದೇ



ಚೆನ್ನಾಗಿರುತ್ತದೆಂದೂ, ಓದುಬರೆಹ ಬೇಡವೆಂದೂ ಹೇಳಿದುದನ್ನು ಕೇಳಿ ಗುರುವಿಗೆ ಆಶ್ಚರ್ಯವಾಯಿತು.

ನಾಲ್ಕು ದಿನ ಮೈಮುರಿದು ಕೆಲಸ ಮಾಡಿದರೆ ಅವನಿಗೆ ಬುದ್ಧಿ ಬರುತ್ತದೆಂದು ಗುರುಗಳು ನೋಡಿದರು. ಆದರೆ ದಿನಗಳು ಕಳೆಯುತ್ತಿದ್ದರೂ ಸುಬ್ಬನಲ್ಲಿ ಯಾವ ವ್ಯತ್ಯಾಸವೂ ಬರಲಿಲ್ಲ. ಉತ್ಸಾಹದಿಂದ ಬಿಡುವಿಲ್ಲದೆ ಕೆಲಸಮಾಡಿಕೊಂಡೇ ಇದ್ದನು.

ಆಗ ಗುರುಗಳು ಅವನನ್ನು ಹತ್ತಿರ ಕುಳ್ಳಿರಿಸಿಕೊಂಡು, "ಎಲೋ, ಎಮ್ಮೆಗಳು ಮೇಯುವ ಹುಲ್ಲು ಹಾಲಾಗಿ ಮಾರ್ಪಡುತ್ತದೆ. ಅದಕ್ಕೆ ಕಾರಣವೇನೆಂದರೆ, ಎಮ್ಮೆಯ ಶರೀರ ನಿರ್ಮಾಣದಲ್ಲಿರುವ ಪ್ರತ್ಯೇಕತೆ. ಇದೇ ವಿಧವಾಗಿ ಮನುಷ್ಯನಿಗೆ ಬರುವ ಅನುಭವಗಳು ಜ್ಞಾನವಾಗಿ ಮಾರ್ಪಡುತ್ತವೆ. ಅದಕ್ಕಾಗಿ ಓದು ತಿಳಿದಿರಬೇಕು. ಆ ವಿಶೇಷಗಳನ್ನೆಲ್ಲ ಹೇಳಿಕೊಡುತ್ತೇನೆ, ಮನಸ್ಸುಕೊಟ್ಟು ಕೇಳುವಿಯಾ?" ಎಂದು ಕೇಳಿದರು.

"ಸುಮ್ಮನೆ ಕುಳಿತು ಕೇಳುವ ಕೆಲಸವೆಂದರೆ ನನಗೆ ಆಗದು. ತಲೆಗೂ ಹತ್ತದು. ಬರೀ ಬೇಜಾರು" ಎಂದನು ಸುಬ್ಬ.

ಮತ್ತೆ ನಾಲ್ಕು ದಿನಗಳು ಕಳೆದ ಮೇಲೆ ಗುರುಗಳು ಅವನನ್ನು ಕರೆದು, "ಎಲೋ, ಒಂದು ವಿದ್ಯೆ ಕಲಿತರೆ ನೀನು ಗಾಳಿಯಲ್ಲಿ ಹಾರಬಹುದು. ನೀರಿನ ಮೇಲೆ ನಡೆಯಬಹುದು. ಅಂತಹ ಮಂತ್ರಗಳನ್ನು ಹೇಳಿಕೊಡುತ್ತೇನೆ. ಅದಕ್ಕೆ ಮೊದಲು ನೀನು ಅಕ್ಷರಗಳನ್ನು ಕಲಿಯಬೇಕು. ಕಲಿಯುವಿಯಾ?" ಎಂದು ಕೇಳಿದರು.

ಸುಬ್ಬನು ಸರಿ ಎಂದನು. ಗುರುಗಳು ಅವನಿಗೆ ಅಕ್ಷರ ಕಲಿಸಲು ಪ್ರಾರಂಭಮಾಡಿದರು. ಕಲಿಯುವಷ್ಟು ಹೊತ್ತೂ ಅವನ ಮನಸ್ಸು ಮನೆ ಕೆಲಸಗಳ ಕಡೆಗೇ ಓಡುತ್ತಿತ್ತು. ಎಷ್ಟು ಹೊತ್ತು ತಿದ್ದಿದರೂ ಅವನಿಗೆ ಒಂದು ಅಕ್ಷರವೂ ಬರಲಿಲ್ಲ.

ಆಗ ಗುರುಗಳು ಅವನ ಬಳಿಗೆ ಐದು ವರ್ಷದ ಹುಡುಗನೊಬ್ಬನನ್ನು ಕರೆದು ತಂದು, "ನೋಡು ಸುಬ್ಬಾ, ಇವನಿಗೆ ಐದು ವರ್ಷ ಪ್ರಾಯವಷ್ಟೇ. ನಿನಗೆ ಹತ್ತು ವರ್ಷ ಪ್ರಾಯ. ಇವನು ಈಗ ಎಷ್ಟು ಬೇಗ ಕಲಿಯುತ್ತಾನೋ ನೋಡು" ಎಂದರು.

ಆ ಸಣ್ಣ ಹುಡುಗನಿಗೆ ಸ್ವಲ್ಪ ಹೊತ್ತಿನಲ್ಲಿ ಅನೇಕ ಅಕ್ಷರಗಳು ಬಂದು ಬಿಟ್ಟುವು. ಸುಬ್ಬನು ಅವನನ್ನು ಪರೀಕ್ಷಿಸಿ ನೋಡಿ, "ಅಕ್ಷರಗಳನ್ನು ಕಲಿಯಲು ಐದು ವರ್ಷ ವಯಸ್ಸೇ ಇರಬೇಕು. ನಾನು ದೊಡ್ಡವನಾಗಿ ಹೋದೆ. ಅದಕ್ಕೇ ನನಗೆ ಅಕ್ಷರಗಳು ಬರುವುದಿಲ್ಲ" ಎಂದನು.

ಗುರುಗಳು ಶಾಂತತೆಯಿಂದ, "ಅಕ್ಷರಗಳನ್ನು ಕಲಿಯಲು ಇಷ್ಟೇ ವಯಸ್ಸು ಎಂಬ ನಿರ್ಬಂಧವೇ ಇಲ್ಲ. ನೀನು ಬೇರೆ ಯಾರಾದರೂ ದೊಡ್ಡವನನ್ನೇ ಕರೆದುಕೊಂಡು ಬಾ. ನಾನು ಅವನಿಗೆ ಕಲಿಸುತ್ತೇನೆ" ಎಂದನು.



ಸುಬ್ಬನು ಮನೆಗೆ ಹೋಗಿ ಒಬ್ಬ ರೈತನನ್ನು ಕರೆದು ಕೊಂಡು ಬಂದನು. ಸ್ವಲ್ಪ ಹೊತ್ತು ತಿದ್ದಿದ ಕೂಡಲೇ ಅವನಿಗೆ ಅಕ್ಷರಗಳನ್ನು ಬರೆಯಲು ಬಂದುಬಿಟ್ಟಿತು.

"ನೋಡಿದೆಯಾ? ಓದುಬರೆಹ ಕಲಿಯಲು ಶ್ರದ್ಧೆ ಇದ್ದರೆ ಸಾಕು. ವಯಸ್ಸು ಹೇಗಿದ್ದರೂ ಆಗ ಬಹುದು" ಎಂದರು ಗುರುಗಳು ಸುಬ್ಬನಿಗೆ.

"ನಾನು ಕರೆದು ತಂದವನಿಗೆ ಇಪ್ಪತ್ತು ವರ್ಷ ವಯಸ್ಸು. ಆದ್ದರಿಂದ ಅವನಿಗೆ ಬೇಗನೇ ಬಂದಿತು. ನನಗೂ ಇಪ್ಪತ್ತು ವರ್ಷ ವಯಸ್ಸು ಬಂದರೆ ನಾನೂ ಓದು ಬರೆಹ ಕಲಿಯುತ್ತೇನೆ" ಎಂದನು ಸುಬ್ಬ.

"ಹೋಗಲಿ, ಹತ್ತು ವಯಸ್ಸಿನವರಾರನ್ನಾದರೂ ಕರೆದುಕೊಂಡು ಬಾ. ಅವನು ಹೇಗೆ ಕಲಿಯು ತ್ತಾನೋ ನೋಡು" ಎಂದರು ಗುರುಗಳು ಸಹನೆ ಯನ್ನು ಬಿಡದೆ.

ಸುಬ್ಬನು ಹೋಗಿ ಊರೊಳಗೆಲ್ಲಾ ತಿರುಗಿದನು. ಹತ್ತು ವಯಸ್ಸಿನ ಹುಡುಗರೆಲ್ಲಾ ಓದುಬರೆಹ ಕಲಿಯುತ್ತಿದ್ದರು. ಓದುಬಾರದ ಹತ್ತು ವಯಸ್ಸಿನ ಹುಡುಗನೊಬ್ಬನೂ ಅವನಿಗೆ ಸಿಗಲಿಲ್ಲ.

ಅದನ್ನು ಕೇಳಿ ಗುರುಗಳು, "ನೋಡಿದಿಯಾ? ಅಷ್ಟು ಮಂದಿ ಹುಡುಗರ ನಡುವೆ ನಿನಗೊಬ್ಬನಿಗೇ ಓದು ಬರುವುದಿಲ್ಲ ಎಂಬುದು ಬಹಳ ಅವಮಾನ ವಪ್ಪ. ಆದ್ದರಿಂದ ಇನ್ನಾದರೂ ಶ್ರದ್ಧೆ ಇಟ್ಟು ಕಲಿಯಪ್ಪಾ" ಎಂದರು.

"ನನಗೆ ಅದರಿಂದ ಯಾವ ಅವಮಾನವೂ ಅನಿ ಸುವುದಿಲ್ಲ. ಅವರವರ ಅದೃಷ್ಟ ಅವರವರಿಗಾಯಿತು. ನನ್ನದು ಹೀಗೆ. ನೀವು ಬಹಳ ಕುಳ್ಳಗಿರುವಿರೆಂದು ಎಲ್ಲರೂ ನಗುತ್ತಾರಷ್ಟೆ? ಅದು ನಿಮಗೂ ಗೊತ್ತಿದೆ. ಅದಕ್ಕಾಗಿ ನೀವು ಅವಮಾನವೆಂದುಕೊಂಡರೆ ಏನು ಪ್ರಯೋಜನ? ನೀವು ಎತ್ತರಕ್ಕೆ ಬೆಳೆದು ಬಿಡಲು ಸಾಧ್ಯವೆ? ನನಗೂ ಓದು ಬಾರದು, ಅಷ್ಟೇ!" ಎಂದನು ಸುಬ್ಬ.

"ನೋಡು! ನೀನು ಓದುಬರೆಹ ಕಲಿಯಲಾರೆ ನೆಂದರೆ ದಿನಾ ನೀನು ಹತ್ತು ಕೊರಡೇ ಪೆಟ್ಟು ತಿನ್ನ ಬೇಕಾಗುತ್ತೆ! ಜಾಗ್ರತೆ!" ಎಂದು ಹೆದರಿಸಿದರು ಗುರುಗಳು.

"ಇದು ಬಹಳ ಅನ್ಯಾಯ ಸ್ವಾಮೀ!" ಎಂದನು ಸುಬ್ಬ.

"ಅನ್ಯಾಯವೇನಿದೆ?" ಎಂದು ಗುರುಗಳು ಕೇಳಿದರು.

"ಸ್ವಾಮೀ, ಓದು ಕಲಿಯುವುದು ನನ್ನ ಬಾಧ್ಯತೆ. ಆ ಬಾಧ್ಯತೆಯಲ್ಲಿ ಲೋಪವಿದ್ದರೆ ಅದರ ತಪ್ಪು ನನ್ನದು, ಅದಕ್ಕೆ ಶಿಕ್ಷೆ ಅನುಭವಿಸಬೇಕಾದವನು ನಾನು. ಹಾಗೆಯೇ ವಿದ್ಯೆ ಕಲಿಸುವುದು ನಿಮ್ಮ ಬಾಧ್ಯತೆ, ನನಗೆ ಓದು ಬಾರದೇ ಹೋದರೆ ನೀವು ಸರಿಯಾಗಿ ಹೇಳಿಕೊಡಲಿಲ್ಲವೆಂಬೇ ಅರ್ಥವಾಗು ತ್ತದೆ. ಅದು ನಿಮ್ಮ ತಪ್ಪು. ನನ್ನ ತಪ್ಪಿಗೆ ನೀವು ನನ್ನನ್ನು ಶಿಕ್ಷಿಸುವೆನೆನ್ನುವಿರಿ. ಹಾಗಾದರೆ ನಿಮ್ಮ

ತಪ್ಪಿಗೆ ನಿಮ್ಮನ್ನು ಯಾರು ಶಿಕ್ಷಿಸುತ್ತಾರೆ?" ಎಂದು ಪ್ರಶ್ನಿಸಿದನು ಸುಬ್ಬ.

ಅದನ್ನು ಕೇಳಿ ಗುರುಗಳು ಬೆರಗಾಗಿ, "ಅಪ್ಪಾ, ನೀನು ನನ್ನ ಕಣ್ಣು ತೆರೆಯಿಸುವಂಥ ಮಾತು ಹೇಳಿದಿ. ನಿನ್ನ ಲೋಪಗಳು ನಿನಗೆ ಗೊತ್ತಾಗುವುದಿಲ್ಲ, ಗೊತ್ತಾದರೂ ತಿದ್ದಿಕೊಳ್ಳುವುದಿಲ್ಲ. ನನ್ನ ಲೋಪ ನನಗೆ ತಿಳಿಸಿದಿ, ತಿದ್ದಿಕೊಳ್ಳುತ್ತೇನೆ. ನಿನಗೆ ಓದು ಕಲಿಸುತ್ತೇನೆಂದು ಹೇಳಿದ್ದೇ ನನ್ನ ತಪ್ಪು. ಇನ್ನು ನೀನು ಇಲ್ಲಿರಬೇಡಪ್ಪ, ಸಂತೋಷದಿಂದ ಮನೆಗೆ ಹೋಗು" ಎಂದರು.

"ನನ್ನ ಅಪ್ಪ, ಒಂದು ವರ್ಷದವರೆಗೆ ಮಳೆಗೆ ಬರಕೂಡದು ಅಂದಿದ್ದಾರಲ್ಲಾ!" ಎಂದನು ಸುಬ್ಬ ಅನುಮಾನದಿಂದ.

"ಒಂದು ವರ್ಷ ಮುಗಿಯುವುದರೊಳಗೆ ಗುರುವಿಗೇ ಅವರ ತಪ್ಪು ಹೇಳಿಕೊಟ್ಟೆನೆಂದು ನಿನ್ನ ತಂದೆಯ ಹತ್ತಿರ ಹೇಳು, ಆಮೇಲೆ ನಿನ್ನನ್ನು ನನ್ನ ಹತ್ತಿರ ಕಳುಹಿಸಲಾರನು, ಹೋಗಿಬಿಡು" ಎಂದರು ಗುರುಗಳು.

ಸುಬ್ಬನು ಮನೆಗೆ ಹಿಂದಿರುಗಿದನು. ಅವನ ತಂದೆ ಸಂಗತಿ ತಿಳಿದು, ಗಾಬರಿಯಾಗಿ ಗುರುಗಳ ಬಳಿಗೆ ಬಂದು ವಿಚಾರಿಸಿದನು. "ನಿನ್ನ ಮಗನಿಗೆ ಓದು ಒಂದರ ಹೊರತು ಬೇರೆ ಏನು ಕಲಿಸಿದರೂ ಬಂದುಬಿಡುತ್ತದೆ. ಇನ್ನು ನನ್ನನ್ನು ತೊಂದರೆಪಡಿಸಬೇಡ" ಎಂದು ಗುರುಗಳು ಅವನನ್ನು ಹಿಂದಿರುಗಿ ಕಳುಹಿಸಿದರು.

ಸುಬ್ಬನಿಗೆ ಒಂದಕ್ಷರವೂ ಬಾರದೆ ಹೋದರೂ, ದೊಡ್ಡವನಾದ ಮೇಲೆ ವ್ಯವಸಾಯದಲ್ಲಿ ಗಟ್ಟಿಗನಾದನು. ಆಗ ಅವನಿಗೆ ಓದಿಕೊಳ್ಳಬೇಕಾದ ಅಗತ್ಯ ತಿಳಿದು ಬಂತು. ಅದರಿಂದ ಅವನು ತಾನಾಗಿ ಗುರುಗಳ ಬಳಿಗೆ ಹೋಗಿ ಆಶ್ರಯಿಸಿದನು.

ಗುರುಗಳು ಮೊದಲು ಹೆದರಿದರೂ, ಈಸಾರಿ ಅವನಿಗೆ ಓದು ಬರೆಹಗಳು ಬಹು ಬೇಗನೆ ಬಂದುಬಿಟ್ಟಿತು.

"ನೋಡಿದಿರಾ ಸ್ವಾಮೀ! ನಾನು ಹೇಳಿದ ಹಾಗೇ ಆಯಿತು. ಓದು ಬರೆಹ ಕಲಿಯಲು ಐದನೆಯ ವಯಸ್ಸಿನಲ್ಲಾದರೂ ಪ್ರಾರಂಭಿಸಬೇಕು, ಇಲ್ಲವೇ ಇಪ್ಪತ್ತು ವಯಸ್ಸು ದಾಟಿದಾಗ ಕಲಿಯಬೇಕು. ಆಗಲೇ ಬರುತ್ತದೆ!" ಎಂದನು ಸುಬ್ಬ ಹೆಮ್ಮೆಯಿಂದ.

"ಹಾಗೇನು ಸಂಗತಿ? ಈ ಮೊದಲು ನಿನಗೆ ಓದು ಬರೆಹ ಬಾರದೆ ಹೋಗಲು ನನ್ನ ಲೋಪ ಅಲ್ಲವೆಂದಾಯಿತು. ಆಸಕ್ತಿ ಇಲ್ಲದ ನಿನ್ನ ಲೋಪವೆಂದೂ ತಿಳಿಯಿತು. ಸಂತೋಷವಪ್ಪ!" ಎಂದರು ಗುರುಗಳು ನಗುತ್ತ.








## ೬

[ಸರ್ಪಕೇತು ಇನ್ನಿಷ್ಟು ಸೈನ್ಯದೊಂದಿಗೆ ನಗರದೊಳಗೆ ಪ್ರವೇಶಿಸಿಬಿಟ್ಟುದರಿಂದ, ಚಂದ್ರವರ್ಮನ ವ್ಯೂಹವು ವಿಫಲವಾಯಿತು. ಅವನು ಸುಬಾಹುವಿನೊಂದಿಗೆ ನಗರದ ಆಸೆ ಬಿಟ್ಟು ಗುಡ್ಡಗಳ ಕಡೆಗೆ ಓಡತೊಡಗಿದನು. ಶತ್ರುಗಳು ಬೆಂಬತ್ತಿಕೊಂಡೇ ಇರಲು, ಬೇರೆ ಉಪಾಯ ಕಾಣದೆ ಚಂದ್ರವರ್ಮ ಸುಬಾಹುಗಳಿಬ್ಬರೂ, ಕಣಿವೆಯೊಳಗೆ ಪ್ರವಹಿಸುವ ನದಿಯೊಳಗೆ ಧುಮುಕಿದರು. —ಇನ್ನು ಓದಿರಿ]

ಈಜಲಿಕ್ಕೆ ಸಾಧ್ಯವಿಲ್ಲದಂತೆ ಹೊರಳಿ ಸುಳಿದು ಸುತ್ತಿ ದೊಡ್ಡ ಒಯ್ಲಿನೊಂದಿಗೆ ಸಾಗುವ ಆ ಕಣಿವೆಯ ನದಿಯ ನೀರಿನಲ್ಲಿ ಧುಮುಕಿದ ಚಂದ್ರವರ್ಮನು ಚಡಪಡಿಸುತ್ತ ಈಜಲು ಪ್ರಯತ್ನಿಸಿದನು. ಆದರೆ ಪ್ರವಾಹ ವೇಗದ ಒಯ್ಲು ಸೆಳೆತಗಳು ಅವನನ್ನು ಆಚೆಗೂ ಈಚೆಗೂ ದೂಡಿದೂಡಿ ಹಾಕುತ್ತಿದ್ದುವು. ಬೆಟ್ಟದ ಅಂಚಿನಲ್ಲಿರುವ ಶತ್ರು ಸೈನಿಕರು ಕೂಗಿ ಅರಚಿ ಮಾತಾಡಿಕೊಳ್ಳುತ್ತ ಗಲಾಟೆ ಮಾಡುವ ಧ್ವನಿ ಅವನಿಗೆ ಕೇಳುತ್ತಾ ಇದ್ದಿತು. ಸುಬಾಹು ಏನಾದನೆಂದು ತಿಳಿಯಲು ಬಹಳ ತಡಕಾಡಿದನು. ಅವನೂ ತನ್ನ ಹಾಗೆ ನದಿಗೆ ಹಾರಿದನೆ? ಶತ್ರುಗಳ ಕೈಗೆ ಸಿಕ್ಕಿಗಿಕ್ಕಿ ಬಿದ್ದನೆ? ಅಥವಾ ಶತ್ರುಗಳು ಹೊರಳಿಸುವ ಕಲ್ಲುಗಳಡಿಯಲ್ಲಿ ಸಿಕ್ಕಿ ಜಜ್ಜಿ ಹೋದನೇ?

ಈ ಬಗೆಯ ತಲೆಬುಡವಿಲ್ಲದ ಆಲೋಚನೆಗಳಿಂದ ತಪಿಸುತ್ತ, ಚಂದ್ರವರ್ಮನು ಪ್ರವಾಹ ವೇಗದೊಂದಿಗೆ ಸಾಗುತ್ತಲೇ ಇದ್ದನು. ಸರಿಯಾಗಿ ಈಜಲಿಕ್ಕಂತೂ ಅವನಿಂದ ಆಗಲೇ ಇಲ್ಲ. ಅದಕ್ಕಾಗಿ ನಡೆದ ಒದ್ದಾಟದಲ್ಲಿ ತೋಳುಗಳೂ ಕಾಲುಗಳೂ ನೋಯತೊಡಗಿದುವು. ಸ್ವಲ್ಪಹೊತ್ತಿಗೆ ಆಯಾಸ ತಾಳ




ಲಾಗದೆ ಬವಳಿ ಬರತೊಡಗಿತು. ಇನ್ನು ತನಗೆ ಸಾವು ತಪ್ಪುವುದಿಲ್ಲ. ಎಲ್ಲಾ ದೇವತೆಗಳೂ ತನ್ನ ಕೈಬಿಟ್ಟರು. ಇನ್ನು ತಂದೆಯ ಗತಿ ಏನಾಗುತ್ತದೋ! ಅವರು ಆಧಾರವಾಗಿ ನಂಬಿರುವ ಈ ಮಗನ ಗತಿ ಅವರಿಗೆ ತಿಳಿಯದಂತಾಯಿತಲ್ಲಾ! ಅಯ್ಯೋ! ಕಡೇ ಸಾರಿ ಮುಳುಗಿ ಹೋಗುತ್ತಿದ್ದೇನೆ! ಎಂದುಕೊಳ್ಳುತ್ತಾ, ದೊಡ್ಡ ನಿಸ್ಪೃಹತೆಯಿಂದ ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿಕೊಂಡನು.

ಮತ್ತೇನಾಯಿತೆಂಬುದು ಅವನಿಗೆ ತಿಳಿಯದು. ಕಣ್ಣು ತೆರೆದು ನೋಡುವಾಗ ಸೂರ್ಯನು ಆಕಾಶದ ಮಧ್ಯದಲ್ಲಿದ್ದನು. ಸುತ್ತಮುತ್ತಲೂ ಒತ್ತೊತ್ತಾಗಿ ಬೆಳೆದ ಮರಗಳು ತುಂಬಿದ ಅಡವಿ. ತಾನು ಯಾವುದೋ ಒಂದು ನೀರು ತುಂಬಿದ ಮಡುವಿನ ಹತ್ತಿರ ಬಿದ್ದುಕೊಂಡಿದ್ದೇನೆಂದು ಅವನು ತಿಳಿದನು. ಅದು ಹೇಗೋ ಅದೃಷ್ಟವಶಾತ್ತಾಗಿ ತಾನು ನದಿಯ ನೀರ್ಗುಂಡಿಯಲ್ಲಿ ಮುಳುಗಿ ಸಾಯದೆ, ದಯಾಮಯಿ ನದಿಯ ತೆರೆಗೈಗಳು ತನ್ನನ್ನು ತೀರಕ್ಕೆ ತಳ್ಳಿರಬೇಕು ಎಂದು ತೋರಿತು. ತನ್ನ ಅರಿವು ತಿಳಿದ ಕೂಡಲೇ ಅವನಿಗೆ ಸುಬಾಹುವಿನ ನೆನಪು ಬಂದಿತು. ಎದ್ದು ಕುಳಿತು ಸುಬಾಹು ಎಲ್ಲಿಯಾದರೂ ಕಾಣುವನೇ ಎಂದು ಸುತ್ತುಮುತ್ತಲೂ ನೋಡಿದನು. ಅವನ ಸುಳಿವೇನೂ ಇಲ್ಲ.

ಸ್ವಲ್ಪಹೊತ್ತಿಗೆ ಚಂದ್ರವರ್ಮನಿಗೆ ತನಗೆ ಹಸಿವೆಯಾಗುತ್ತಿರುವುದು ತಿಳಿಯಿತು. ಅಲ್ಲಿಂದೆದ್ದು ಸಮೀಪದಲ್ಲಿದ್ದ ಮರದ ಬುಡಕ್ಕೆ ಹೋದನು. ಅಲ್ಲಿಯ ಕೆಲವು ಮರಗಳು ಫಲದ ಭಾರಗಳಿಂದ ಬಗ್ಗಿದ ಹಾಗಿದ್ದುವು. ಕೈಗೆ ಎಟಕುವಂತೆ ದೊಡ್ಡ ಹಣ್ಣುಗಳಿರುವುದನ್ನು ನೋಡಿ, ಕಿತ್ತು ಆತುರದಿಂದ ತಿಂದನು. ಆ ಸಮಯದಲ್ಲಿ ಅವನಿಗೆ ಅದು ಎಷ್ಟು ಭಯಂಕರವಾದ ಅಡವಿ ಎಂಬುದು ಗೊತ್ತಾಗಲಿಲ್ಲ.

ಹಸಿವೆ ಅಡಗಿದ ಮೇಲೆ ಚಂದ್ರವರ್ಮನು ತನ್ನ ಪರಿಸ್ಥಿತಿಯನ್ನು ಕುರಿತು ಆಲೋಚಿಸ ತೊಡಗಿದನು. ತಾನು ಶತ್ರುಗಳ ಕೈಗೆ ಸಿಕ್ಕಿಬೀಳದೆ ತಪ್ಪಿಸಿಕೊಂಡುದೇನೋ ಆಯಿತು. ಅದೊಂದು ಅದೃಷ್ಟ ನಿಜ. ಈಗ ತಾನಿರುವ ಈ ಅಡವಿ ಪ್ರಾಂತ ಯಾವುದು? ಎಲ್ಲಿಯದು? ಇದರೊಳಗೆ ಮಾನವಮಾತ್ರರು ಯಾರಾದರೂ ಇರುವರೆ? ಅಥವಾ ಕ್ರೂರ ಮೃಗಗಳಿಗೂ, ಭೂತಪ್ರೇತಗಳಿಗೂ ಪ್ರತ್ಯೇಕಿಸಲ್ಪಟ್ಟ ಅರಣ್ಯವೆ? ಈ ಪ್ರಶ್ನೆಗಳಿಗೆ ಉತ್ತರ ಹುಡುಕಲು ಚಂದ್ರವರ್ಮನು ಮೆಲ್ಲಮೆಲ್ಲನೆ ಕಾಡಿನೊಳಗೆ ಹೋಗತೊಡಗಿದನು. ಅವನು ಮರಗಳ ಬುಡದಲ್ಲಿ ಸ್ವಲ್ಪದೂರ ನಡೆಯುವಷ್ಟರಲ್ಲಿ, ಛಕ್ಕನೆ ಬಿರುಗಾಳಿ ಪ್ರಾರಂಭವಾದ ಹಾಗೆ ಮರಗಳೆಲ್ಲಾ ಒಮ್ಮೆಗೇ ಭೂಮಿಯ ಕಡೆಗೆ ಒರಗಿದುವು. ಮೈನವಿರೇಳುವ ಹಾಗೆ ನಾಲ್ಕು ಸುತ್ತಲೂ ಸಿಳ್ಳಿನ ಧ್ವನಿಗಳೂ, ಕರ್ಕಶ ಕೂಗುಗಳೂ ಕೇಳತೊಡಗಿದುವು. ಕಿವಿ ತೂತಾಗುವಂತಹ ಒಂದೇ ಬೊಬ್ಬೆ.

ಈ ವಿಚಿತ್ರ ವ್ಯತ್ಯಾಸವನ್ನು ನೋಡಿ, ಚಂದ್ರವರ್ಮನು ಸ್ಥಾಣುವಿನಂತೆ ನಿಂತುಬಿಟ್ಟನು. ಮರದ ಕೊಂಬೆಗಳೆಲ್ಲಾ ಅವನ ಕಡೆಗೆ ಕೈಗಳನ್ನು ಚಾಚುವಂತೆ ಕೊಂಬೆಗಳನ್ನು ಆಡಿಸುತ್ತಾ ಕೀಚು ಕಂಠದಿಂದ ಕೂಗತೊಡಗಿದುವು. ಅವನು ಹೆದರಿ ಎತ್ತಲೋ ಹೋಗಲು ತಿರುಗಿದನು. ಅವನು ಎತ್ತ ತಿರುಗಿದರೆ ಅತ್ತಲೇ ಕೊಂಬೆಗಳೆಲ್ಲ ಚಾಚಿ ಅವನನ್ನು ಹಿಡಿಯುವಂತೆ ನಟಿಸುತ್ತಿದ್ದುವು. ತಾನು ಯಾವುದೋ ಮಂತ್ರಗ್ರಸ್ತವಾದ ಅರಣ್ಯದಲ್ಲಿರುವಂತೆ ಚಂದ್ರವರ್ಮನಿಗೆ ತೋರಿತು. ಈಗ ಈ ಸಂಕಟದಿಂದ ಪಾರಾಗುವ ಬಗೆ ಹೇಗೆ? ತನ್ನನ್ನು ಈ ಬದುಕಿನಲ್ಲಿ ಬಿಟ್ಟ ವಿಧಿಯ ಉದ್ದೇಶವೇನು?

ಚಂದ್ರವರ್ಮನು ತನ್ನ ಒರೆಯಲ್ಲಿದ್ದ ಕತ್ತಿಯನ್ನು ಸೆಳೆದು ತನ್ನನ್ನು ಹಿಡಿಯಲು ಬರುವ ಕೊಂಬೆಯನ್ನು ಹೊಡೆದು ಕಡಿದನು. ಅದುವರೆಗೂ ಕರ್ಕಶವಾಗಿ ಕೂಗುತ್ತಿದ್ದ ಮರಗಳ ಶಬ್ದ, ನರಳಿಕೆಯ ಆರ್ತನಾದಕ್ಕೆ ತಿರುಗಿತು. ಅದರೆಡೆಯಲ್ಲಿ ಭಯಂಕರವಾದೊಂದು ಆರ್ತನಾದವೂ ಕೇಳಿಸಿತು. ಅದಕ್ಕೆ ಪ್ರತಿಯಾಗಿ ಅಗ್ನಿ ಪರ್ವತವು ಸೀಳಿದಂತೆ ಬಿಸಿಬಿಸೀ ಗಾಳಿ ಪ್ರಾರಂಭವಾಯಿತು. ಆ ಪ್ರದೇಶವೆಲ್ಲಾ ಮಾರ್ಮೊಳಗುವಂತೆ ಭುಸ್ ಭುಸ್ ಎಂಬ ಇನ್ನೊಂದು ಶಬ್ದವೆದ್ದಿತು.

ಚಂದ್ರವರ್ಮನು ಸರ್ವಾಂಗ ಕಂಪಿತನಾದನು. ಕ್ಷಾತ್ರ ವೀರನಾದ ಅವನಿಗೆ ಮರುಕ್ಷಣದಲ್ಲಿ ಎಲ್ಲಿಲ್ಲದಷ್ಟು ಧೈರ್ಯವೂ, ಸಾಹಸವೂ ಆವೇಶಿತವಾಯಿತು. ಅವನು ಕತ್ತಿಯನ್ನು ಬಿಗಿಯಾಗಿ ಹಿಡಿದುಕೊಂಡು ಹಾವಿನ ಭುಸುಗುಡುವಿಕೆಯೂ, ಬಿಸಿ ಗಾಳಿಯೂ ಹೊರಡುವ ದಿಕ್ಕಿಗೆ ತಿರುಗಿದನು.

ಆಗ ಅವನ ಮುಂದೆ ಹರಿದುಕೊಂಡು ಬರುವ ದೊಡ್ಡ ದೊಡ್ಡ ಮೂರು ತಲೆಗಳಿರುವ ಸರ್ಪವೊಂದು ಕಂಡುಬಂತು. ಅದು ನಾಲಗೆಗಳನ್ನು ಹೊರಕ್ಕೂ ಒಳಕ್ಕೂ ನೀಡಿ ಎಳೆದುಕೊಳ್ಳುತ್ತ, ದೊಡ್ಡ ಶಬ್ದದಿಂದ ಭುಸುಗುಟ್ಟುತ್ತಾ ಅವನನ್ನು ಸಮೀಪಿಸುತ್ತಿದ್ದಿತು. ಒಂದೊಂದೇಟಿಗೆ ಒಂದೊಂದು






ತಲೆ ಅಂದುಕೊಳ್ಳುತ್ತ ಚಂದ್ರವರ್ಮನು ಕತ್ತಿಯನ್ನು ಎತ್ತಿದನು. ಅಷ್ಟರಲ್ಲಿ ಅಡವಿಯೊಳಗಿನಿಂದ ವಿಕಾರವಾದ ಕಂಠಸ್ವರದಲ್ಲಿ ಆಪ್ಯಾಯತೆಯನ್ನು ತುಳುಕಿಸುವ ಮಾತು ಬರುವುದು ಕೇಳಿಸಿತು.

"ಕಂದಾ, ಕಾಲನಾಗೂ! ಈ ಮಾನವನನ್ನು ಕೊಲ್ಲಬೇಡ. ಕಷ್ಟಗಳಿಗೆ ಸಿಕ್ಕಿ ದಿಕ್ಕುಗಾಣದೆ ನಮ್ಮ ಬಳಿಗೆ ಬಂದವನು ಇವನು. ಅತಿಥಿಗೆ ಸಮಾನನಾದ ಇವನನ್ನು ಕ್ಷೇಮವಾಗಿ ನನ್ನ ಬಳಿಗೆ ಕರೆದುಕೊಂಡು ಬಾರಪ್ಪಾ!" ಒಡಕು ವೀಣೆಯ ಧ್ವನಿಯಂತಿತ್ತು ಆ ಕಂಠಸ್ವರ.

ಆ ಮಾತುಗಳನ್ನು ಕೇಳಿ ಮೂರು ತಲೆಗಳ ಕಾಲಸರ್ಪವು ಚಂದ್ರವರ್ಮನ ಸಮೀಪದಲ್ಲಿ ಮುಂದೆ ಬಾರದೆ ನಿಂತುಬಿಟ್ಟಿತು. ಕಾಡಿನೊಳಗಿನ ಮರಗಳೆಲ್ಲವೂ ನಿಃಶಬ್ದವಾಗಿ ಎದ್ದುಕೊಂಡು ಮೊದಲಿನಂತೆ ಸ್ತಬ್ಧವಾಗಿ ನಿಂತುವು. ಗಾಳಿಯೂ ಸ್ತಂಭಿಸಿ ಹೋಯಿತು.

ಚಂದ್ರವರ್ಮನು ಆ ಮಹಾ ಸರ್ಪವನ್ನೇ ನೋಡುತ್ತಿರಲು, ಅದು ತನ್ನನ್ನು ಅನುಸರಿಸಿ ಬರುವಂತೆ ಸೂಚನೆಯಾಗಿ, ಮೂರು ತಲೆಗಳನ್ನೂ ಒಂದು ಸಾರಿ ಹಿಂದಕ್ಕೂ ಮುಂದಕ್ಕೂ ಆಡಿಸಿ, ಕಾಡಿನೊಳಗೆ ಅಡ್ಡವಾಗಿ ಹೊರಟಿತು. ಚಂದ್ರವರ್ಮನಿಗೆ ಬೇರೆ ಮಾರ್ಗ ಕಾಣದುದರಿಂದ, ಅದರ ಹಿಂದೆ ಹೋಗದೆ ಗತ್ಯಂತರವಿಲ್ಲ. ಈ ಅಡವಿ ಪ್ರಾಂತವನ್ನೆಲ್ಲಾ ಮಂತ್ರಶಕ್ತಿಯಿಂದ ಯಾವನೋ ವಶಪಡಿಸಿಕೊಂಡ ಹಾಗೆ ಕಾಣುತ್ತದೆ. ಹೆಣ್ಣಿನದೋ ಗಂಡಿನದೋ ತಿಳಿಯದಂತಹ ಆ ಕಂಠಸ್ವರವು ಆ ಮಂತ್ರವಾದಿಯದೇ ಆಗಿರಬೇಕು. ಆದುದರಿಂದ ಈ ಮೂರು ತಲೆಗಳ ಸರ್ಪದ ಹಿಂದೆ ಹೋಗಿ ಅವನ ಬಲವೆಂತಹುದೆಂದು ತಿಳಿಯಬೇಕು. ಅಲ್ಲದೆ ತಾನು ತಪ್ಪಿಸಿಕೊಂಡು ಹೋಗಲು ನೋಡಿದರೆ ಈ ನಿಮಿಷದಲ್ಲೇ ಸಾಯಬೇಕಾದೀತು.

ಚಂದ್ರವರ್ಮನು ಹೀಗೆ ಆಲೋಚಿಸುತ್ತ, ಕತ್ತಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ಕಾಲಸರ್ಪವನ್ನು ಅನುಸರಿಸಿ ನಡೆದನು. ಸ್ವಲ್ಪ ದೂರ ಹೋದಾಗ ಮರಗಳ ನಡುವೆ, ಹದ್ದಿನ ತಲೆಯೂ, ರೆಕ್ಕೆಗಳೂ, ಸಿಂಹದ ಶರೀರವೂ ಇರುವ ಘೋರ ವಿಕೃತಾಕಾರವು ಕಂಡುಬಂದಿತು. ಸರ್ಪವು ಅದರ ಮುಂದೆ ಹೋಗಿ ನಿಂತು, ಮೂರು ತಲೆಗಳನ್ನೂ ಒಂದೇ ಸಾರಿ ಬಾಗಿಸಿ ದೊಡ್ಡ ಶಬ್ದದಿಂದ ಭುಸುಗುಟ್ಟಿತು. ಮರುಕ್ಷಣದಲ್ಲಿ ಆ ವಿಕೃತಾಕಾರವು ಅಡಿಯಿಂದ ಮುಡಿಯವರೆಗೆ ಎರಡಾಗಿ ಸೀಳಿ, ಎರಡು ಪಕ್ಕಗಳಲ್ಲಿ ಬಿದ್ದುಹೋಯಿತು.

ಅಲ್ಲೊಂದು ಶಿಥಿಲಾವಸ್ಥೆಯಲ್ಲಿದ್ದ ಗೃಹ, ಅದರ ಬಾಗಿಲಲ್ಲಿ ಬೆಳ್ಳಗಿನ ತಲೆಗೂದಲುಗಳಿಂದ, ನಿರಿಗೆಗಟ್ಟಿದ ಶರೀರದಿಂದ, ಸೊಂಟ ಬಗ್ಗಿ ಹೋದ ಸ್ತ್ರೀಯೊಬ್ಬಳು ಚಂದ್ರವರ್ಮನ ಕಣ್ಣಿಗೆ ಬಿದ್ದಳು. ಚಂದ್ರವರ್ಮನ ಬಾಯಿಯಿಂದ ಮಾತೇ ಹೊರಡ

ಲಿಲ್ಲ. ಏಕೆಂದರೆ ಆ ಸ್ತ್ರೀಯನ್ನು ನೋಡಿದ ಕೂಡಲೇ ಅವಳು ಪಿಶಾಚಿಯೋ, ಮಾನವ ಸ್ತ್ರೀಯೋ ಎಂಬ ಸಂದೇಹ ಬರುವಂತಿದ್ದಳು.

ಅವನನ್ನು ನೋಡಿದ ಕೂಡಲೇ ಆ ಸ್ತ್ರೀ, ಕೈಯಲ್ಲಿದ್ದ ಕೋಲನ್ನು ಮೂರು ಸಾರಿ ಭೂಮಿಯ ಮೇಲೆ ಕುಟ್ಟಿ, "ಕಾಲನಾಗಾ, ಇನ್ನು ನೀನು ಹೋಗಬಹುದಪ್ಪಾ" ಎಂದು ಚಂದ್ರವರ್ಮನನ್ನು ನೋಡಿ, "ಬಾರಪ್ಪಾ, ಬಾ. ನಿನಗಾಗಿ ಬಹಳ ಕಾಲದಿಂದ ಇದಿರು ನೋಡಿಕೊಂಡೇ ಇದ್ದೆನು. ಈ ದಿನ ನಿನಗೆ ತಿಳಿಯದಂತೆಯೇ ಬಂದಿರುವಿ!" ಎಂದಳು ಪ್ರೀತಿಯ ದನಿಯಿಂದ.

"ನನ್ನೆನ್ನು ಇದಿರು ನೋಡುವುದೆಂದರೇನು? ಯಾರು ನೀನು?" ಎಂದನು ಚಂದ್ರವರ್ಮ ಆಶ್ಚರ್ಯವನ್ನು ತುಳುಕಿಸುತ್ತ.

"ಹೌದಪ್ಪ, ನಿನಗಾಗಿಯೇ ಕಾಯುತ್ತಿದ್ದೇನೆ. ನಾನು ನಿನಗೆ ಮಾಡಬೇಕಾದ ಸಹಾಯವೂ, ನೀನು ನನಗೆ ಮಾಡಬೇಕಾದ ಸಹಾಯವೂ ತುಂಬಾ ಇದೆ. ಹೇಳುತ್ತೇನೆ, ಬಾರಪ್ಪ" ಎಂದಳು ಆ ಸ್ತ್ರೀ. ಅವಳ ಮಾತುಗಳನ್ನು ಕೇಳುವಾಗ ಅವಳು ಮಾನವ ಸ್ತ್ರೀಯೇ ಅನಿಸಿತು. ಬಹುದೊಡ್ಡ ಮಾಂತ್ರಿಕಳೇ ಇವಳು ಎಂದುಕೊಂಡನು ಚಂದ್ರವರ್ಮ.

"ನಾನು ಯಾರೆಂದು ನಿನಗೆ ಹೇಗೆ ಗೊತ್ತಾಯಿತು? ನಿನ್ನ ಹೆಸರೇನಮ್ಮ?" ಎಂದು ಕೇಳುತ್ತ ಅವಳ ಬಳಿಗೆ ನಡೆದನು.

"ನನ್ನ ಹೆಸರು ಕಾಪಾಲಿನಿ. ನಾನು ನಿನಗೆ ಯಾವ ಕೆಡುಕೂ ಮಾಡುವವಳಲ್ಲ, ಆದ್ದರಿಂದ ಆ ಕತ್ತಿಯನ್ನು ಒರೆಯೊಳಗೆ ಹಾಕಿಕೋ. ಒಂದು ವೇಳೆ ನನ್ನ ಬುದ್ಧಿ ಮಾರ್ಪಟ್ಟು ನಿನಗೆ ಕೇಡು ಬಗೆಯಲು ನೋಡಿದರೆ ಆ ಕತ್ತಿ ನಿನಗೆ ಯಾವ ಪ್ರಯೋಜನಕ್ಕೂ ಬಾರದು. ನೀನು ಈ ಅರಣ್ಯದೊಳಗೆ ಪ್ರವೇಶಿಸಿದ ಕೂಡಲೇ ನನ್ನ ಶಕ್ತಿಯನ್ನು ನೋಡಿದೆಯಷ್ಟೆ? ಕಣ್ಣು ಬಾಯಿಗಳಿಲ್ಲದ ಮರಗಿಡಗಳಿಂದ ಮಾತಾಡಿಸುವವಳು ನಾನು. ಅವುಗಳೇ ನಿನ್ನನ್ನು ತಡೆದಿವೆ" ಎಂದಳು ಕಾಪಾಲಿನಿ.







ತಾನೀಗ ನಿಸ್ಸಹಾಯಕ ಸ್ಥಿತಿಯಲ್ಲಿರುವೆನೆಂದು ಚಂದ್ರವರ್ಮನಿಗೆ ಗೊತ್ತಾಯಿತು. ಅವನು ಕತ್ತಿಯನ್ನು ಒರೆಯೊಳಗೆ ಹಾಕುತ್ತ, "ಅಮ್ಮಾ, ಕಾಪಾಲಿನೀ! ನಾನು ಕೇವಲ ಅನಾಥನಾಗಿದ್ದೇನೆ. ರಾಜ್ಯವನ್ನೂ, ಸ್ನೇಹಿತರನ್ನೂ ಕಳೆದುಕೊಂಡು, ಈ ಅರಣ್ಯಕ್ಕೆ ಬಂದುಬಿದ್ದ ನಿರ್ಭಾಗ್ಯದ ರಾಜಕುಮಾರನಾದ ನಾನು, ನಿನಗೆ ಯಾವ ಬಗೆಯ ಹಾನಿಯನ್ನೂ ಮಾಡಲಾರೆನು. ನಾನು ಕತ್ತಿ ಹಿಡಿದದ್ದು ನನ್ನ ಪ್ರಾಣ ರಕ್ಷಣೆಗೇ ಹೊರತು ಅನಾವಶ್ಯಕ ಪ್ರತೀಕಾರಕ್ಕೆ ಅಲ್ಲ. ನಿನ್ನಿಂದ ನನಗೇನೂ ಕೆಡುಕಾಗದೆಂದು ಅಭಯವಿತ್ತಿರುವಿ, ನಂಬಬಹುದಷ್ಟೆ? ನಂಬದೆ ಬೇರೆ ದಾರಿಯಿಲ್ಲವೆಂತಲೂ ತಿಳಿದಿದ್ದೇನೆ" ಎಂದನು ಸಣ್ಣಗೆ ನಗುತ್ತ.

"ನಿನ್ನ ಬರುವಿಕೆಯನ್ನೇ ಇದಿರು ನೋಡಿಕೊಂಡಿರುವ ನಾನು ನಿನಗೆ ಕೆಡುಕು ಮಾಡುವುದುಂಟೆ?" ಎಂದು ಕಾಪಾಲಿನಿ ಕೌತುಕದಿಂದ ಚಂದ್ರವರ್ಮನನ್ನು ನೋಡುತ್ತ, "ಚಂದ್ರವರ್ಮಾ, ನಾನು ನನ್ನ ಕೈಲಾದಷ್ಟು ನಿನಗೆ ಸಹಾಯ ಮಾಡಲಿಕ್ಕೇ ಇದ್ದೇನೆಂದು ನಂಬು, ಆದರೆ ನಾನು ಸಹಾಯ ಮಾಡುವುದಕ್ಕೆ ಮೊದಲು, ನನಗೊಂದು ಸಹಾಯ ನೀನು ಮಾಡಬೇಕಾಗಿದೆ" ಎಂದಳು.

ತನ್ನ ಹೆಸರು ಹಿಡಿದು ಸಂಬೋಧಿಸಿದುದನ್ನು ಕೇಳಿದ ಕೂಡಲೇ ಚಂದ್ರವರ್ಮನಿಗೆ ಆ ಕಾಪಾಲಿನಿಯ ಶಕ್ತಿ ಸಾಮರ್ಥ್ಯಗಳ ಮೇಲೆ ನಂಬುಗೆಯುಂಟಾಯಿತು. ಬಹುಶಃ ಇವಳಿಗೆ ತನ್ನ ಸರ್ವ ಸಮಾಚಾರವೂ ಗೊತ್ತಿರಬೇಕು. ಈಗ ವೀರಪುರದಲ್ಲಿ ಏನು ನಡೆಯುತ್ತದೆಂದು, ಸರ್ವಸೇನಾನಿ ಧೀರಮಲ್ಲನೂ, ಸುಬಾಹುವೂ ಏನಾದರೆಂಬುದನ್ನು ಕೂಡಾ ಇವಳು ಹೇಳಬಹುದೇನೋ?

ಚಂದ್ರವರ್ಮನು ನಿರ್ಭೀತನಾಗಿ ಕಾಪಾಲಿನಿಯ ತೀರ ಹತ್ತಿರ ಹೋದನು. ಅವಳು ಅವನನ್ನು ತುಂಬ ಗೌರವದಿಂದ ಮನೆಯ ಒಳಭಾಗಕ್ಕೆ ಕರೆದುಕೊಂಡು ಹೋದಳು. ಒಳ ಭಾಗದ ಗೋಡೆಗಳಲ್ಲಿ ಅನೇಕ ಪ್ರಾಣಿಗಳ ತಲೆಗಳೂ, ಮಾನವ ಕಪಾಲಗಳೂ ನೇತಾಡಿಕೊಂಡಿದ್ದುವು. ದೊಡ್ಡ ಗವಾಕ್ಷವಿರುವ ಕಡೆಯಲ್ಲಿ ವಿಚಿತ್ರವಾಗಿ ತಯಾರಿಸಲ್ಪಟ್ಟ ಒಂದು ಮೇಜಿಯ ಮೇಲೆ ದೊಡ್ಡದೊಂದು ಗಾಜಿನ ಗೋಳವು ತಳತಳನೆ ಹೊಳೆಯುತ್ತಿದ್ದಿತು.

ಕಾಪಾಲಿನಿ ಚಂದ್ರವರ್ಮನಿಗೆ ಗಾಜಿನ ಗೋಳವಿರುವ ಮೇಜಿನ ಹತ್ತಿರವಿದ್ದ ಮೆತ್ತೆಯನ್ನು ತೋರಿಸುತ್ತ "ಚಂದ್ರವರ್ಮಾ, ಇಲ್ಲಿ ಕುಳಿತುಕೋ. ನೀನು ನದಿಯಲ್ಲಿ ಮುಳುಗಿ ಸಾಯದೆ ಬದುಕಿ ಹೊರ ಬಿದ್ದದ್ದು ನಿಜಕ್ಕೂ ನನ್ನ ಪುಣ್ಯವೇ ಎಂದು ತಿಳಿದಿದ್ದೇನೆ. ನಾನು ಸಾಧಿಸಬೇಕಾದ ಒಂದು ಕಾರ್ಯವು ನಿನ್ನಿಂದಲೇ ಸಾಧ್ಯವಾಗಬೇಕಾಗಿದೆ. ನಿನ್ನ ಹೊರತು ಬೇರೆ ಯಾರಿಂದಲೂ ಅದು ಸಾಧ್ಯವಾಗುವಂತಹುದಲ್ಲ" ಎಂದಳು.

ಚಂದ್ರವರ್ಮನು ಅವಳು ಹೇಳಿದ ಮೆತ್ತೆಯ ಮೇಲೆ ಕುಳಿತು, "ಕಾಪಾಲಿನೀ, ಈ ಗೋಳವು ಬಹಳ ಅದ್ಭುತವಾಗಿ ಕಾಣುತ್ತದೆ. ಇಂತಹುದರ ಉಪಯೋಗವನ್ನು ಕುರಿತು ನಾನು ಸ್ವಲ್ಪ ಮಟ್ಟಿಗೆ ಕೇಳಿದ್ದೇನೆ. ಆದರೆ ನಂಬಲು ಕಷ್ಟವಾಗಿತ್ತು. ಇಂತಹುದ ರಲ್ಲಿ ನಮ್ಮಂತಹ ಮನುಷ್ಯರ ಭೂತ, ಭವಿಷ್ಯ ವರ್ತಮಾನ ಕಾಲಗಳನ್ನು ಕೂಡಾ ನೋಡಬಹು ದೆನ್ನುತ್ತಾರೆ. ನಿಜವೇನು ?" ಎಂದನು.



ಚಂದ್ರವರ್ಮನ ಪ್ರಶ್ನೆಯನ್ನು ಕೇಳಿ ಕಾಪಾಲಿನಿ ನಿಸ್ಪೃಹೆಯಿಂದ ಉದ್ದವಾದೊಂದು ಉಸಿರುಬಿಟ್ಟು, "ಅಪ್ಪಾ, ಚಂದ್ರವರ್ಮಾ, ನೀನು ಅಂದುಕೊಳ್ಳುವ ಹಾಗೆ ಈ ಗಾಜಿನ ಗೋಳವು, ನಿಜಕ್ಕೂ ಭವಿಷ್ಯತ್ತನ್ನು ಕೂಡಾ ತಿಳಿಸುವಂತಹುದಾಗಿದ್ದರೆ, ನಾನು ಇಷ್ಟು ನಿರಾಶೆಪಡಬೇಕಾದ ಅಗತ್ಯವಿರಲಿಲ್ಲ. ಈ ಗೋಳವು ಭೂತಕಾಲ, ವರ್ತಮಾನಕಾಲಗಳನ್ನಷ್ಟೇ ತೋರಿಸು ತ್ತದೆ. ಆ ಕಾರಣದಿಂದಲೇ ನಾನು ಒಂದಾನೊಂದು ಕಷ್ಟಸಾಧ್ಯವಾದ ಕೆಲಸವನ್ನು ಸಾಧಿಸಲಿಕ್ಕೆ ನಿನ್ನ ಸಹಾಯವನ್ನು ಕೇಳುತ್ತಿದ್ದೇನೆ" ಎಂದಳು.

"ಆ ಕಾರ್ಯವು ಅಷ್ಟೊಂದು ಕಷ್ಟಸಾಧ್ಯ ವಾಗಿದ್ದರೆ ನನ್ನಂಥವನಿಂದ ಮಾತ್ರ ಹೇಗೆ ಸಾಧ್ಯ ವಾದೀತು ?" ಎಂದನು ಚಂದ್ರವರ್ಮ.

"ಅಪ್ಪಾ, ಅದು ಬಹು ಕಷ್ಟಸಾಧ್ಯವೆಂಬುದು ನಿಜವೇ ಆದರೂ, ಅಸಾಧ್ಯವಾದುದು ಮಾತ್ರ ಅಲ್ಲ. ಇಲ್ಲಿಗೆ ನೂರು ಯೋಜನಗಳಷ್ಟು ದೂರದಲ್ಲಿ ಶಂಖನೆಂಬ ಹೆಸರಿನ ಒಬ್ಬಾನೊಬ್ಬ ಮಾಂತ್ರಿಕ ನಿದ್ದಾನೆ. ನೀನು ಅವನ ಮಂತ್ರ ಮಂದಿರದೊಳಗೆ ಹೊಕ್ಕು, ನನಗಾಗಿ ಒಂದಾನೊಂದು ವಸ್ತುವನ್ನು ಸಂಗ್ರಹಿಸಿ ತಂದು ಕೊಡಬೇಕು. ಆ ವಸ್ತು ನನ್ನ ಕೈಗೆ ಲಭಿಸಿದರೆ, ನಾನು ಇನ್ನೊಂದು ಸಾವಿರ ವರ್ಷ ಕಾಲ ರೂಪ ಯೌವನ ಆರೋಗ್ಯಗಳಿಂದ ಸುಖ ವಾಗಿರುತ್ತೇನೆ. ಇಲ್ಲದೇ ಹೋದರೆ ಮಾತ್ರ..."

ಕಾಪಾಲಿನಿ ಮಾತು ಮುಗಿಸದೆಯೇ, ಕಂಠ ಬಿಗಿದುಕೊಂಡವಳಾಗಿ ಬಿಕ್ಕಿಬಿಕ್ಕಿ ಅಳುತ್ತ, ಉಕ್ಕುಕ್ಕಿ ಬರುವ ಕಣ್ಣೀರನ್ನು ಸೆರಗಿನ ತುದಿಯಿಂದ ಒರೆಸಿ ಕೊಳ್ಳ ತೊಡಗಿದಳು. ಆಗ ಚಂದ್ರವರ್ಮನಿಗೆ ಅವಳ ಮೇಲೆ ಅತ್ಯಂತ ಕರುಣೆಯುಂಟಾಯಿತು. ಈ ಮಂತ್ರವಾದಿನಿ ತನಗೆ ಮೋಸ ಮಾಡಿ ತನ್ನನ್ನು ಹತ ಮಾಡುವಳೇನೋ ಎಂಬ ಸಂಶಯವು ಅದು ವರೆಗೂ ಸ್ವಲ್ಪ ಮಟ್ಟಿಗೆ ಅವನ ಮನಸ್ಸಿನಲ್ಲಿತ್ತು. ಈಗ ಅವಳ ದುಃಖವನ್ನು ನೋಡಿ ಅದೆಲ್ಲಾ ಮಟ ಮಾಯವಾಯಿತು.

"ದುಃಖಿಸಬೇಡವಮ್ಮಾ, ನಾನು ನಿನಗೆ ನನ್ನ ಕೈಲಾದಷ್ಟು ಸಹಾಯ ಮಾಡುತ್ತೇನೆ. ಆದರೆ, ಮೊದಲು ನೀನು ನನಗೊಂದು ಸಣ್ಣ ಉಪಕಾರ ಮಾಡಬೇಕಾಗಿದೆ. ನನ್ನ ವೀರಪುರ ನಗರವು ಈಗ ಯಾವ ಸ್ಥಿತಿಯಲ್ಲಿದೆ ? ನಮ್ಮ ಸೇನಾಧಿಪತಿ ಧೀರ ಮಲ್ಲನೂ, ನಮ್ಮ ನಂಬುಗೆಯ ಸೇವಕ ಸುಬಾಹುವೂ

ಬದುಕಿಯೇ ಇರುವರೋ? ಆ ವೃತ್ತಾಂತವಿಷ್ಟು ಈ ಗಾಜಿನ ಗೋಳದಲ್ಲಿ ನೋಡಿ ಹೇಳಬಲ್ಲೆಯಾ?" ಎಂದು ಕೇಳಿದನು ಚಂದ್ರವರ್ಮ.

ಕಾಪಾಲಿನಿ ಮುಗುಳು ನಗುತ್ತ ಎದ್ದು, ಗೋಡೆಗೆ ತಗಲಿಸಿದ್ದ ಒಂದು ಮಾನವನ ಎಲುವಿನ ಕೋಲನ್ನು ತೆಗೆದುಕೊಂಡು, ಗೋಳದ ಹತ್ತಿರ ಬಂದು ಮಂತ್ರವನ್ನು ಉಚ್ಚರಿಸುತ್ತ, ಗೋಳವನ್ನು ಎಲುವಿನ ಕೋಲಿನಿಂದ ಮುಟ್ಟುತ್ತ — "ಇದಿಗೋ ಚಂದ್ರವರ್ಮಾ, ನಿನ್ನ ವೀರಪುರ ನಗರವನ್ನು ನೋಡು! ಗುರುತುಹಿಡಿ" ಎಂದಳು.

ಭಗಭಗನೆ ಉರಿಯುವ ಬೆಂಕಿಗಳಿಂದ, ಆಕಾಶವನ್ನೆಲ್ಲಾ ಕವಿದ ಹೊಗೆಯಿಂದ, ಸಿಕ್ಕಸಿಕ್ಕ ದಾರಿಗಳಲ್ಲಿ ದಿಕ್ಕುದೆಸೆ ತಿಳಿಯದಂತೆ ಓಡುತ್ತಿರುವ, ಹಾಹಾಕಾರದ ದೀನಾರ್ತ ಜನರಿಂದ ಪ್ರತ್ಯಕ್ಷವಾದ ವೀರಪುರ ನಗರವನ್ನು ನೋಡಿದ ಕೂಡಲೇ, ಚಂದ್ರವರ್ಮನು ವಿಕೃತವಾಗಿ ಕೂಗಿ, ಕಣ್ಣುಗಳನ್ನು ಮುಚ್ಚಿಕೊಂಡು, "ಅಯ್ಯೋ! ಕಾಪಾಲಿನೀ! ಸಾಕು ಸಾಕು! ಆ ಘೋರ ದೃಶ್ಯ ನೋಡಲಾರೆನು!" ಎಂದು ಗಟ್ಟಿಯಾಗಿ ಕಿರಿಚಿದನು. ಕಾಪಾಲಿನಿ ಮತ್ತೊಂದು ಮಂತ್ರ ಹೇಳುತ್ತ ಮಾನವಾಸ್ಥಿಕೆಯಿಂದ ಆ ಗೋಳವನ್ನು ಮುಟ್ಟಿದ್ದೇ ತಡ, ಆ ಭಯಪಡಿಸುವ ದೃಶ್ಯವು ಮಾಯವಾಗಿ ಹೋಯಿತು.

"ಅಕೋ, ನಿನ್ನ ಸೇನಾಧಿಪತಿ ಧೀರಮಲ್ಲನನ್ನು ನೋಡು" ಎಂದು ಕಾಪಾಲಿನಿ, ಮತ್ತೊಮ್ಮೆ ಆ ಗಾಜಿನ ಗೋಳಕ್ಕೆ ಮಾನವಾಸ್ಥಿಕೆ ತಾಗಿಸಿದಳು.

ಚಂದ್ರವರ್ಮನು ಕಣ್ಣುಗಳನ್ನು ಬಿಡಿಸಿ ಆ ಗೋಳವನ್ನು ಅತ್ಯಾತುರದಿಂದ ನೋಡಿದನು. ಏರುತಗ್ಗುಗಳಾದ, ಹೊಂಡದಿಣ್ಣೆಗಳಿಂದ ಕೂಡಿದ ಗುಡ್ಡಬೆಟ್ಟಗಳ ಪ್ರಾಂತದಲ್ಲಿ ಸೇನಾನಿ ಧೀರಮಲ್ಲನು ತನ್ನ ಅಶ್ವಿಕರೊಂದಿಗೆ ವೇಗವಾಗಿ ಹೋಗುತ್ತಿದ್ದನು. ಅವನನ್ನು ಎಲ್ಲಾ ಕಡೆಗಳಿಂದಲೂ ಮುತ್ತಿಗೆ ಹಾಕುವಂತೆ ಸರ್ಪಕೇತುವಿನ ಬಳಗವು ಸಮೀಪಿಸುತ್ತಿದ್ದಿತು. ಧೀರಮಲ್ಲನು ಕುದುರೆಯನ್ನು ನಿಲ್ಲಿಸಿ, ಕತ್ತಿ ಹಿರಿದು ತನ್ನ ಅನುಚರರಿಗೆ ಏನೋ ಹೇಳಿ ತನ್ನ ಕುದುರೆಯನ್ನು ಶತ್ರುಗಳಿಗೆ ಇದಿರಾಗಿ ಧುಮುಕಿಸಿದನು.

"ಈ ಘಟನೆ ಈ ದಿನ ಬೆಳಿಗ್ಗೆ ನಡೆದುದು. ಆಮೇಲೆ ಧೀರಮಲ್ಲನು ಏನಾದನೆಂದು ನೀನು ನೋಡುವುದು ಒಳ್ಳೆಯದಲ್ಲವಪ್ಪಾ" ಎಂದು ಕಾಪಾಲಿನಿ ತನ್ನ ಕೈಯಲ್ಲಿದ್ದ ಮಾನವಾಸ್ಥಿಕೆಯಿಂದ ಗಾಜಿನ ಗೋಳದ ದೃಶ್ಯವನ್ನು ಮಾಯಗೊಳಿಸಿದಳು.

ಚಂದ್ರವರ್ಮನು ಏನೂ ತೋರದವನಂತೆ ನಿರ್ವಿಣ್ಣತೆಯಿಂದ, ಆ ಗೋಳವನ್ನು ಪಿಳಿಪಿಳಿ ನೋಡುತ್ತಾ ಹಾಗೆಯೇ ಸ್ತಂಭಿಸಿ ತಿರುಗುವ ತಲೆಯನ್ನು ಹಿಡಿದುಕೊಂಡು ನಿಂತನು.— (ಇನ್ನೂ ಇದೆ)






# ಆಲೋಚಿಸುವ ಯಂತ್ರ

ಅದು ಹೇಗೆ ತನ್ನ ತಲೆ ಒಡೆಯುವುದೋ ನೋಡಬೇಕೆಂಬ ಹಟ ಹಿಡಿದವನಂತೆ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಅಡಗಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ನೀನು ಯಾವುದೋ ಆಶೆಯಿಂದ ಈ ನಡುರಾತ್ರಿಯ ಹೊತ್ತಿನಲ್ಲಿ ಇಷ್ಟೊಂದು ಕಷ್ಟಪಡುತ್ತಿರುವೆಯಷ್ಟೆ? ಆ ನಿನ್ನ ಆಶೆ ತೀರಿಹೋದ ಮೇಲೆ ನೀನು ನಿಜಕ್ಕೂ ತೃಪ್ತನಾಗುವಿ ಎಂಬ ನಂಬುಗೆ ನನಗೇನಿಲ್ಲ. ಹೀಗೆ ಸುಮ್ಮನೆ ಹೇಳುವೆನೆಂದು ತಿಳಿಯಬೇಡ. ಇದಕ್ಕೆ ಉದಾಹರಣೆಯಾಗಿ ಶಂತನವರ್ಮನೆಂಬ ರಾಜನ ಕಥೆ ಹೇಳುತ್ತೇನೆ. ನಡೆಯುವ ಕಷ್ಟ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆ ಹೇಳಲು ತೊಡಗಿತು :

ಕುಂತಲ ದೇಶವನ್ನು ಶಂತನವರ್ಮನು ಪಾಲಿಸಿಕೊಂಡಿದ್ದನು. ಅವನು ದೊಡ್ಡ ಧರ್ಮಬುದ್ಧಿಯುಳ್ಳವನು. ಅವನ ಪಾಲನೆಯಲ್ಲಿರುವ ಪ್ರಾರು

ಬೇತಾಳಕಥೆಗಳು?...

ಮೂಲೆಯ ಗ್ರಾಮಗಳಲ್ಲಿ ಕೂಡಾ ಪ್ರಜೆಗಳಿಗೆ ಶತ್ರು ಭಯವೋ, ಕಳ್ಳರ ಕಾಟವೋ ಇರಲಿಲ್ಲ. ರಾಜನ ಒಳ್ಳೆಯ ಶಾಸನಗಳ ಫಲವು ಮೂಲೆ ಮುಡುಕುಗಳಲ್ಲಿಯೂ ವ್ಯಾಪಿಸಿಕೊಂಡಿದ್ದಿತು. ಆದರೆ ಪ್ರಕೃತಿ ವೈಪರೀತ್ಯಗಳಿಂದ ಅತಿವೃಷ್ಟಿಯೋ, ಅನಾವೃಷ್ಟಿಯೋ ಸಂಭವಿಸಿದಾಗ ಮಾತ್ರ ಪ್ರಜೆಗಳು ಕಷ್ಟದಲ್ಲಿ ಬೀಳುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಸ್ವತಃ ರಾಜನೇ ಆಯಾ ಪ್ರಾಂತಗಳನ್ನು ಸಂದರ್ಶಿಸಿ, ಕಷ್ಟದಲ್ಲಿ ಸಿಕ್ಕಿದವರಿಗೆ ಸಾಧ್ಯವಾದಷ್ಟು ಸಹಾಯ ಮಾಡುತ್ತಿದ್ದನು. ಆದುದರಿಂದ ರಾಜನ ಮೇಲೆ ಪ್ರಜೆಗಳ ಗೌರವವು ತಗ್ಗುತ್ತಿರಲಿಲ್ಲ.

ಒಂದು ಸಾರಿ ಮಳೆಗಾಲದಲ್ಲಿ, ಆ ದೇಶದ ನಡುವೆ ಪ್ರವಹಿಸುತ್ತಿದ್ದ ಬಲಭದ್ರಾನದಿ, ನೆರೆಯಿಂದ ಉಕ್ಕಿ ಕೆಲವು ಪ್ರಾಂತಗಳನ್ನು ಮುಳುಗಿಸಿ ಹಾಕಿತು. ಈ ಕೆಟ್ಟ ಸಮಾಚಾರವನ್ನು ತಿಳಿದು ಶಂತನವರ್ಮನು ಕೆಲವು ಉದ್ಯೋಗಸ್ಥರೊಂದಿಗೆ, ಸರಿಯಾದ ದಾರಿ ಇಲ್ಲದ ಆ ಪ್ರದೇಶಕ್ಕೆ ಹೋಗಿ, ಹೊಲ ಮನೆಗಳನ್ನು ಕಳೆದುಕೊಂಡವರಿಗೆ ರಕ್ಷಣೆ ಕಲ್ಪಿಸಿಕೊಟ್ಟನು. ಅಲ್ಲಿಂದ ಅವನು ರಾಜಧಾನಿಗೆ ಹಿಂದಿರುಗುತ್ತಿದ್ದಾಗ, ಒಂದು ಅರಣ್ಯ ಪ್ರದೇಶದಲ್ಲಿ ಒಂದು ಋಷ್ಯಾಶ್ರಮವನ್ನು ನೋಡಿದನು. ವಿಚಾರಿಸಿದಾಗ ಅಲ್ಲಿ ಜ್ಞಾನಾಶ್ರಯನೆಂಬ ಮುನಿ ಇರುವನೆಂದೂ, ಅವನು ತಪಸ್ವಿ ಮಾತ್ರವಲ್ಲದೆ ಬಹುದೊಡ್ಡ ಯೋಗಿ ಎಂದೂ ತಿಳಿಯಿತು.

ಶಂತನವರ್ಮ ರಾಜನು ಹೋಗಿ ಆ ಮುನಿಯನ್ನು ದರ್ಶನ ಮಾಡಿದನು. ಮುನಿ ಅವನನ್ನು ಆದರದಿಂದ ಸ್ವಾಗತ ಹೇಳಿ ಬರಮಾಡಿಕೊಂಡು, "ರಾಜಾ, ನಿನ್ನ ಸಂಗತಿ ನನಗೆ ಗೊತ್ತಿದೆ, ನೀನು ತುಂಬಾ ಧರ್ಮನಿಷ್ಠನು. ಪ್ರಜೆಗಳ ಸುಖವೇ ನಿನ್ನ ಸುಖವೆಂದು ತಿಳಿದವನು. ನಿನ್ನಂತಹ ರಾಜರು ಅಪೂರ್ವವೇ ಸರಿ. ನೀನು ಈಗ ನನ್ನನ್ನು ನೋಡಲು ಬಂದಿರುವುದರಿಂದ, ನಿನ್ನ ಮನಸ್ಸಿನಲ್ಲಿರುವ ಕೋರಿಕೆಯನ್ನು ಹೇಳು. ನಿನ್ನಂಥವನ ಒಳ್ಳೆಯ ಕೋರಿಕೆಗಳನ್ನು ತೀರಿಸಬೇಕಾದುದು ನನ್ನಂಥವನ ಕರ್ತವ್ಯ" ಎಂದನು.



ಶಂತನವರ್ಮನು ವಿನಯದಿಂದ, "ಮಹಾತ್ಮಾ! ಪ್ರಜೆಗಳ ಕ್ಷೇಮಕ್ಕಾಗಿ ಏನೇನೋ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇನೆ. ಆದರೆ ಅವು ನಾನು ಆಶಿಸುವಷ್ಟು ವೇಗವಾಗಿ ನಡೆಯುವುದೇ ಇಲ್ಲ. ಚಂಡಮಾರುತ, ನೀರಿನ ನೆರೆ ಮೊದಲಾದ ಪ್ರಕೃತಿ ವಿಕೋಪಗಳನ್ನು ತಡೆಯಲು ಸಾಧ್ಯವಾಗುವುದಿಲ್ಲವೆಂಬುದು ನಿಜವೇ. ಆದರೆ ಮುಂದಾಗಿ ತಿಳಿದರೆ ಅವುಗಳಿಂದ ಪ್ರಜೆಗಳು ವಿಪರೀತ ಕಷ್ಟಗಳಿಗೆ ಗುರಿಯಾಗದಂತೆ ತಕ್ಕ ರಕ್ಷಣೆಯ ಏರ್ಪಾಡು ಮಾಡಬಹುದಷ್ಟೆ? ಅದು ನನಗೆ ಸಾಧ್ಯವಾಗುವುದಿಲ್ಲ. ಮಹಾಜ್ಞಾನಿಗಳಾದ ತಾವು ಏನಾದರೂ ಒಳ್ಳೆಯ ಮಾರ್ಗ ಹೇಳಿದರೆ ತೃಪ್ತನಾಗುತ್ತೇನೆ" ಎಂದು ಕೇಳಿಕೊಂಡನು.

ಜ್ಞಾನಾಶ್ರಯ ಮುನಿ ಮುಗುಳುನಗುತ್ತ, "ನಿನ್ನ ಕೋರಿಕೆಯೇನೋ ಚೆನ್ನಾಗಿದೆ. ಯಾವ ಕೆಲಸವನ್ನಾದರೂ ಕ್ರಮವಾಗಿ ನಿರ್ವಹಿಸಬೇಕಾದರೆ ಮೊದಲು ಚೆನ್ನಾಗಿ ಆಲೋಚನೆ ಮಾಡಬೇಕು. ಆಗ ಕಾರ್ಯವು ಜಯಪ್ರದವಾಗುತ್ತದೆ. ನಿನ್ನ ಹತ್ತಿರ ಕಾರ್ಯದಕ್ಷರಾದ ಉದ್ಯೋಗಸ್ಥರು ಇದ್ದಾರೆಯೆ?" ಎಂದು ಕೇಳಿದನು.

"ನನ್ನ ಹತ್ತಿರ ಇರುವ ಉದ್ಯೋಗಸ್ಥರ ದಕ್ಷತೆಯಲ್ಲಿಯೂ, ಶಕ್ತಿ ಸಾಮರ್ಥ್ಯಗಳಲ್ಲಿಯೂ ನನಗೆ ನಂಬುಗೆ ಇದೆ. ಅವರು ರಾಜ್ಯಪಾಲನೆಗೆ ಸಂಬಂಧಪಟ್ಟ, ಎಲ್ಲಾ ವಿಷಯಗಳಲ್ಲಿಯೂ ತಕ್ಕ ಆಲೋಚನೆ ಹೇಳುತ್ತಾರೆ. ಅದರಲ್ಲಿ ತಪ್ಪುಗಳೇನೂ ಕಾಣುವುದಿಲ್ಲ. ಆದರಿಂದ ಇನ್ನಿಷ್ಟು ಹೆಚ್ಚಿನ ಪ್ರಜಾ ಸೇವೆಯಾಗಬೇಕೆಂಬುದು ನನ್ನ ಅಭಿಲಾಷೆ. ಅದುಮಾತ್ರ ಅಂದುಕೊಂಡಂತೆ ಆಗುವುದಿಲ್ಲ. ಅದೇ ನನಗೆ ಚಿಂತೆ" ಎಂದನು ಶಂತನವರ್ಮ.

ಮುನಿ ಸ್ವಲ್ಪಹೊತ್ತು ಮೌನವಾಗಿ ಸುಮ್ಮನಿದ್ದು, ಆಮೇಲೆ, "ರಾಜಾ, ಹಾಗಾದರೆ, ಅಪೂರ್ವ ಶಕ್ತಿಗಳಿರುವ ಒಂದು ಚಿಕ್ಕ ಯಂತ್ರವನ್ನು ನಿನಗೆ ಕಾಣಿಕೆಯಾಗಿ ಕೊಡುತ್ತೇನೆ. ಅದನ್ನು ತಲೆಯ ಮೇಲಿಟ್ಟುಕೊಂಡು, ನೀನು ಏನು ನಡೆಯಬೇಕೆಂದು ಆಶಿಸು





ವಿಯೋ ಅದನ್ನು ಮನಸ್ಸಿನಲ್ಲಿ ಅಂದುಕೊಂಡರೆ ಸಾಕು. ಆಗ ಯಂತ್ರದಿಂದ ನಿನಗೆ ಒಳ್ಳೆಯ ಸೂಚನೆಗಳು ಸಿಗುತ್ತವೆ" ಎಂದು ಹೇಳಿ, ಒಂದು ಚಿಕ್ಕ ದಂತದ ಪೆಟ್ಟಿಗೆಯನ್ನು ಶಂತನವರ್ಮನಿಗೆ ಕೊಟ್ಟನು.

"ಮಹಾ ಪ್ರಸಾದ !" ಎಂದು ಶಂತನವರ್ಮನು ಅದನ್ನು ಪಡೆದುಕೊಂಡನು.

ಆಗ ಜ್ಞಾನಾಶ್ರಯ ಮುನಿ, "ರಾಜಾ, ಈ ಯಂತ್ರವನ್ನು ಕುರಿತು ಒಂದು ಮುಖ್ಯ ವಿಷಯ ನಿನಗೆ ಹೇಳಬೇಕಾಗಿದೆ. ಇದನ್ನು ನನ್ನ ತಪಸ್ಸಿನ ಶಕ್ತಿಯನ್ನೆಲ್ಲಾ ಧಾರೆಯೆರೆದು ನಿರ್ಮಿಸಿದ್ದೇನೆ. ಆದುದರಿಂದ ಇದರ ಮಹಿಮೆ ನಾನು ಬದುಕಿರುವಷ್ಟು ಕಾಲದವರೆಗಷ್ಟೇ ಇರುತ್ತದೆ. ಈಗ ನಾನು ಎಂಬತ್ತು ವರ್ಷ ಮೀರಿದವನಾಗಿದ್ದೇನೆ. ಇನ್ನೊಂದು ಹದಿನೈದು ವರ್ಷದವರೆಗೆ ಬದುಕಿರಬಲ್ಲೆನು. ಅದುವರೆಗೂ ಇದನ್ನು ನೀನು ನಿಶ್ಚಿಂತೆಯಿಂದ ಉಪಯೋಗಿಸಬಹುದು. ಆಮೇಲೆ ಅದರಿಂದ ಯಾವ ಸೂಚನೆಯೂ ಬಾರದು. ಅದು ಕೇವಲ ದಂತದ ಪೆಟ್ಟಿಗೆ ಮಾತ್ರವೇ" ಎಂದನು.

ಶಂತನವರ್ಮನು ಸ್ವಲ್ಪಹೊತ್ತು ಆಲೋಚನೆ ಮಾಡಿ, ಯಂತ್ರವನ್ನು ಮುನಿಗೆ ಹಿಂದಿರುಗಿಸಿ ಕೊಡುತ್ತ, "ದಯಮಾಡಿ ನನ್ನನ್ನು ಕ್ಷಮಿಸಬೇಕು. ಇದನ್ನು ನಾನು ಸ್ವೀಕರಿಸಲಾರೆನು ಸ್ವಾಮಿ. ತಾವು ಕೋಪಿಸಿಕೊಳ್ಳದೆ ಅನುಗ್ರಹಿಸಬೇಕೆಂದು ಬೇಡುತ್ತೇನೆ" ಎಂದನು.

ಮುನಿ ಆಶ್ಚರ್ಯಪಡುತ್ತ, "ರಾಜಾ, ಇದನ್ನು ಯಾವ ಕಾರಣದಿಂದ ಬೇಡವೆನ್ನುವಿ ? ಈ ಯಂತ್ರವನ್ನು ಹದಿನೈದು ವರ್ಷಗಳವರೆಗೆ ನಿಶ್ಚಿಂತೆಯಿಂದ ಉಪಯೋಗಿಸಬಹುದೆಂದು ಹೇಳಿದೆನಲ್ಲವೆ ? ಅದುವರೆಗೆ ನೀನು ಬಯಸುವ ಎಷ್ಟೋ ಪ್ರಜೋಪಯೋಗವಾದ ಕಾರ್ಯಗಳನ್ನು ನಿನ್ನ ಮನಸ್ಸಿನಂತೆಯೇ ನಿರಾತಂಕವಾಗಿ ನೆರವೇರಿಸಿಕೊಳ್ಳಬಹುದಲ್ಲಾ!" ಎಂದನು.

"ಮಹಾತ್ಮಾ, ಮತ್ತೊಮ್ಮೆ ನನ್ನನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತೇನೆ. ಈ ಯಂತ್ರದಿಂದ ನನಗೆ ತಾತ್ಕಾಲಿಕವಾಗಿ ಪ್ರಯೋಜನ ಸಿಕ್ಕಬಹುದಾದರೂ, ಭವಿಷ್ಯತ್ತಿನಲ್ಲಿ ಇದಿರಾಗುವ ಸಮಸ್ಯೆಗಳಿಗೆ ಆಲೋಚನೆ ಮಾಡಬೇಕಷ್ಟೆ? ಅತೀ ಉತ್ತಮತೆಯನ್ನು ಬಯಸುವುದು ಕೂಡಾ ಕಾಲಕ್ರಮದಲ್ಲಿ ಮೊದಲಿಗಿಂತ ಹೆಚ್ಚಿನ ಚಿಂತೆಗೇ ತಳ್ಳಬಹುದು. ಆದುದರಿಂದ ಈ ಪೆಟ್ಟಿಗೆಯ ಪ್ರಯೋಜನವನ್ನು ತಾಳಲಾಗದ ಕಾರಣದಿಂದಲೇ ಬೇಡವೆನ್ನುತ್ತೇನೆ" ಎಂದನು.

ಮುನಿ ಮತ್ತೇನೂ ಹೇಳದೆ ಮುಗುಳು ನಕ್ಕು ಗೋಣಾಡಿಸಿ, ರಾಜನನ್ನು ಆಶೀರ್ವದಿಸಿ ಕಳುಹಿಸಿ ಕೊಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ನನಗೆ ಆ ಶಂತನವರ್ಮನು ದುರಾಶೆಯವನಾಗಿಯೂ,

ಕೇವಲ ಮುಗ್ಧ ಬುದ್ಧಿಯವನಾಗಿಯೂ ಕಾಣುತ್ತಾನೆ. ಅವನ ಬಯಕೆಯನ್ನು ತಿಳಿದುಕೊಂಡ ಮುನಿ, ತನ್ನ ಯಾವತ್ತೂ ತಪಃಶಕ್ತಿಯನ್ನು ಧಾರೆಯೆರೆದು ಆಲೋಚನೆಯ ಯಂತ್ರವನ್ನು ಕೊಟ್ಟರೆ, ಆ ರಾಜ ತೃಪ್ತಿಪಡಲಿಲ್ಲವೆಂದರೇನು ? ಮುನಿಯನ್ನು ಅವಮಾನಿಸುವಂತೆ ಹಿಂದಿರುಗಿಸುವುದು ಎಂದರೇನು ? ಅದರ ಮೇಲೆ ಎಂದೋ ಬರುವ ಭವಿಷ್ಯತ್ತಿನ ಸಮಸ್ಯೆ ಹೇಳುತ್ತ, ಪ್ರಜೆಗಳಿಗೆ ಮಹೋಪಕಾರ ಮಾಡುವ ಸಂದರ್ಭವನ್ನು ಜಾರಬಿಟ್ಟುದನ್ನು ನೋಡುವಾಗ ಮುಗ್ಧನೆಂದೂ ಕಾಣುತ್ತದೆ. ಅಥವಾ ಪ್ರಜೋಪಯೋಗವೆಂಬುದು ಅವನ ಬಹಿರಂಗದ ವೇಷ ಮಾತ್ರವೋ ? ಈ ಸಂದೇಹಗಳಿಗೆ ತಕ್ಕ ಉತ್ತರ ತಿಳಿದಿದ್ದರೆ ಹೇಳಿ ಜೀವ ಉಳಿಸಿಕೋ ! " ಎಂದು ಸುಮ್ಮನಾಯಿತು.

ತ್ರಿವಿಕ್ರಮನು ಹೀಗೆಂದನು : " ಶಂತನವರ್ಮ ರಾಜನು ಮುನಿ ಕೊಟ್ಟ ಆಲೋಚನೆಯ ಯಂತ್ರವನ್ನು ಮುನಿಗೇ ಹಿಂದಿರುಗಿಸಿದುದರಲ್ಲಿ ದೊಡ್ಡ ಇಂಗಿತ ಜ್ಞಾನವೂ, ವಿವೇಕವೂ ಇದೆ. ತನ್ನ ಸ್ವಂತ ಆಲೋಚನೆಯಲ್ಲಿ ಏನೇ ಲೋಪಗಳಿದ್ದರೂ, ಮಂತ್ರಿ ಮುಂತಾದವರು ಹೇಳುವ ಆಲೋಚನೆಗಳನ್ನು ಕೇಳಿ, ಉದ್ಯೋಗಸ್ಥರಿಂದ ರಾಜ್ಯ ಪರಿಪಾಲನೆ ಸಾಗಿಸಿಕೊಂಡೇ ಇದ್ದಾನೆ. ಹಾಗಿರುವಾಗ ಮುನಿ ಕೊಟ್ಟ ಯಂತ್ರವನ್ನು ಧರಿಸಿಕೊಂಡು, ಅದರಂತೆ ಮಾಡಲು ತೊಡಗಿದರೆ, ಯಾರೊಡನೆಯೂ ಆಲೋಚಿಸಬೇಕಾದ ಅಗತ್ಯವೇ ಬಾರದು. ಆದರಿಂದ ಮಂತ್ರಿ, ಉದ್ಯೋಗಸ್ಥರ ಮಿದುಳಿಗೆ ಕೆಲಸವಿಲ್ಲದೆ ಎಲ್ಲರೂ ಮೊದ್ದುಗಳಾಗುವ ಭಯವಿದೆ. ಹದಿನೈದು ವರ್ಷಗಳ ಮೇಲೆ ಯಂತ್ರವು ತನ್ನ ಶಕ್ತಿಯನ್ನು ಕಳೆದುಕೊಳ್ಳುವುದರಿಂದ, ಇತರರು ಸ್ವತಂತ್ರವಾಗಿ ಆಲೋಚಿಸಲು ಮೊದಲಿನಿಂದ ಮತ್ತೆ ಕಲಿತುಕೊಳಬೇಕಾಗಿ ಬರುತ್ತದೆ. ಆಲೋಚನೆಯ ಶಕ್ತಿ ಇರುವುದರಿಂದಲೇ ಮನುಷ್ಯನು ಇತರ ಜೀವರಾಶಿಗಳನ್ನು ಎಷ್ಟೋ ಪಾಲು ಅಧಿಗಮಿಸಿಕೊಂಡಿರುವಂತಾಗಿದೆ. ಆ ಶಕ್ತಿಯನ್ನೆಲ್ಲಾ ಮೂಲೆಗೆ ಹಾಕಿ, ಮಂತ್ರಯಂತ್ರಗಳಿಂದ ಪಡೆಯುವ ಪ್ರಯೋಜನವು ತಾತ್ಕಾಲಿಕವಷ್ಟೇ ಎಂಬ ಜ್ಞಾನವನ್ನು ಜ್ಞಾನಾಶ್ರಯ ಮುನಿ ಸೂಚಿಸುತ್ತಾನೆಂದು ರಾಜನು ತಿಳಿದು ಅದನ್ನು ಹಿಂದಿರುಗಿಸಿದನು. ಇದರಿಂದ ರಾಜನ ಆಲೋಚನೆಯ ಶಕ್ತಿ ಕಡಿಮೆಯದಲ್ಲವೆಂದೂ ಗೊತ್ತಾಗುತ್ತದೆ ".

ಹೀಗೆ ತ್ರಿವಿಕ್ರಮ ರಾಜನ ಮೌನಭಂಗವಾದ ಕೂಡಲೇ ಅವನ ಹೆಗಲು ಹಗುರವಾಗಿಹೋಗಿತ್ತು. ಬೇತಾಳವು ಶವ ಸಮೇತ ಮಾಯವಾಗಿ ಹೋಗಿ, ಎಂದಿನಂತೆ ಅದೇ ಮರದ ಕೊಂಬೆ ಹಿಡಿದು ನೇತಾಡ ತೊಡಗಿತ್ತು.





# ಮೂರ್ಖ ಮಿತ್ರ ಭಕ್ತ

**ಕಾ**ಡುಗಳಿಗೆ ಸಮೀಪವಾಗಿದ್ದ ಒಂದು ಊರಿನಲ್ಲಿ ಬಡಬ್ರಾಹ್ಮಣನೊಬ್ಬನಿದ್ದನು. ಅವನ ಮನೆಯ ಹತ್ತಿರವೇ ಕಾಡಿಗೆ ಹೋಗಿ ಕಟ್ಟಿಗೆ ತಂದುಕೊಂಡು, ಅದನ್ನು ಮಾರಿ ಬದುಕಿಕೊಂಡಿರುವ ಮತ್ತೊಬ್ಬ ಬಡವನಿದ್ದನು.

ಬ್ರಾಹ್ಮಣನಿಗೆ ಊರೊಳಗೆ ಆಗಾಗ ಪೂಜೆ, ಪುನಸ್ಕಾರ ಮೊದಲಾದ ಪೌರೋಹಿತ್ಯ ವೃತ್ತಿ ಬರುತ್ತಿದ್ದಿತು. ಅಲ್ಲಿ ದೊರೆಯುವ ದಾನ ಧರ್ಮ ದಕ್ಷಿಣೆಗಳೇ ಅವನ ಜೀವನಕ್ಕೆ ಆಧಾರ.

ಇದ್ದಕ್ಕಿದ ಹಾಗೆ ಕಟ್ಟಿಗೆಯ ಬಡವನಲ್ಲಿ ಬಹಳ ಬದಲಾವಣೆ ಕಾಣ ತೊಡಗಿತು. ಅವನು ತನ್ನ ಚಿಕ್ಕ ಗುಡಿಸಲನ್ನು ಬಿಟ್ಟು ಪಕ್ಕದಲ್ಲೊಂದು ಮಾಳಿಗೆ ಮನೆ ಕಟ್ಟಿಕೊಂಡನು. ಅದಕ್ಕೆ ತಕ್ಕ ಹಾಗೆ ಅವನೂ ಅವನ ಹೆಂಡತಿ ಮಕ್ಕಳೂ ಬೆಲೆ ಬಾಳುವ ಭೂಷಣಾಲಂಕಾರಗಳನ್ನು ಧರಿಸ ತೊಡಗಿದರು. ದಿನ ದಿಂದ ದಿನಕ್ಕೆ ಅವನು ಶ್ರೀಮಂತನಾಗುವ ಚಿಂದ ಕಾಣುತ್ತಿದ್ದತು.

ಹೀನ ಸ್ಥಿತಿಯಲ್ಲಿದ್ದ ಕಟ್ಟಿಗೆ ಒಡೆಯುವವನಲ್ಲಿ ಬಂದ ಮಾರ್ಪಾಟನ್ನು ನೋಡಿ ಬ್ರಾಹ್ಮಣನಿಗೆ ಆಶ್ಚರ್ಯವಾಯಿತು. ಬ್ರಾಹ್ಮಣನ ಹೆಂಡತಿ ಗಂಡನೊಂದಿಗೆ, " ನೀವು ಏನೂ ಮಾತಾಡದೆ ಸುಮ್ಮನಿರಿ. ನಾನು ಅವನಿಗೆ ಹೇಗೆ ಇಷ್ಟು ದೊಡ್ಡ ಅದೃಷ್ಟ ಬಂತೆಂಬುದನ್ನೆಲ್ಲ ಕಂಡು ಹಿಡಿದು ಹೇಳುತ್ತೇನೆ, ನೋಡಿ " ಎಂದಳು.

ಮೂರು ದಿನಗಳ ಮೇಲೆ ಬ್ರಾಹ್ಮಣನ ಹೆಂಡತಿ ಗಂಡನೊಂದಿಗೆ, " ಆ ಕಟ್ಟಿಗೆ ಒಡೆದು ಬದುಕುವವನು ಹೇಗೆ ದಿನದಿನಕ್ಕೆ ಶ್ರೀಮಂತನಾಗುತ್ತಿದ್ದಾನೆಂಬ ಗುಟ್ಟು ಗೊತ್ತಾಯಿತು. ಅವನ ಹೆಂಡತಿ ಆ ರಹಸ್ಯ ನನಗೆ ಹೇಳಿಬಿಟ್ಟಳು " ಎಂದು ಉತ್ಸಾಹದಿಂದ ಅದನ್ನೆಲ್ಲ ಹೇಳಿದಳು.

ಕೆಲವಾರು ತಿಂಗಳ ಕೆಳಗೆ ಒಂದುಸಾರಿ ಎಡೆಬಿಡದೆ ರಾತ್ರೀ ಹಗಲೂ ಧಾರಾಕಾರವಾಗಿ ಮಳೆ ಬಂದಿತ್ತು. ಆ ದಿನಗಳಲ್ಲಿ ಕಟ್ಟಿಗೆ ಒಡೆಯುವವನಿಗೆ ಕಾಡಿಗೆ ಹೋಗಲು ಸಾಧ್ಯವಾಗಿರಲಿಲ್ಲ. ಮನೆಯಲ್ಲಿ ಉಳಿದಿದ್ದ ನಾಲ್ಕು ಕಾಸು, ಮುಷ್ಟಿ ಕಾಳು ಎಲ್ಲಾ ಖರ್ಚು ಮಾಡಿ ಮುಗಿದುಹೋಯಿತು. ಆ ಮೇಲೆ ಎರಡು ದಿನಗಳ ವರೆಗೆ ತಿನ್ನಲು ಏನೂ ಇಲ್ಲದೆ ಮನೆಯಲ್ಲಿದ್ದವರೆಲ್ಲರೂ ಉಪವಾಸ ಬಿದ್ದರು.

ಎನ್. ಆರ್. ಪ್ರಸಾದ್

ಆ ದಿನ ರಾತ್ರಿ ಕಟ್ಟಿಗೆಯವನಿಗೆ ಥಕ್ಕನೆ ಒಂದು ಆಲೋಚನೆ ಬಂತು. ಊರಿನ ಹೊರಗೆ ನದಿಯ ಬದಿಯಲ್ಲಿ ಪಾಳುಬಿದ್ದ ಚಿಕ್ಕದೊಂದು ಪುರಾತನ ದೇವಾಲಯವಿದ್ದಿತು. ಅದರೊಳಗೆ ದೊಡ್ಡದೊಂದು ಮರದಿಂದ ಕೆತ್ತಲ್ಪಟ್ಟ ದೇವರ ವಿಗ್ರಹವಿದ್ದಿತು. ಅದರ ನೆನಪು ಬಂದು ಕಟ್ಟಿಗೆಯವನು ಕೊಡಲಿ ತೆಗೆದುಕೊಂಡು ಕತ್ತಲೆಯಲ್ಲಿ ಆ ದೇವಾಲಯಕ್ಕೆ ಹೋದನು.



ಆ ಮರದ ವಿಗ್ರಹವನ್ನು ಕಟ್ಟಿಗೆ ತುಂಡುಗಳಾಗಿ ಒಡೆದುಬಿಟ್ಟರೆ, ಎರಡು ದಿನಗಳ ಖರ್ಚಿಗೆ ಸಾಕಾಗುವಷ್ಟು ಹಣ ಬರಬಹುದೆಂದು ತೋರಿತ್ತು.

ಅವನು ವಿಗ್ರಹದ ಮುಂದೆ ಕೊಡಲಿ ಎತ್ತಿದ ಕೂಡಲೇ, ವಿಗ್ರಹದೊಳಗಿನಿಂದ "ನಿಲ್ಲು" ಎಂಬ ಮಾತು ಕೇಳಿತು.

ಕಟ್ಟಿಗೆ ಒಡೆಯುವವನು ಕೊಡಲಿಯನ್ನು ಕೆಳಗಿಳಿಸದೆ ಹಾಗೆಯೇ ನಿಂತನು. ಆಗ ಮರದ ವಿಗ್ರಹದೊಳಗಿನ ಮಾತುಗಳು ಹೀಗೆ ಕೇಳಿಸಿತು: "ನಿನಗೆ ಬೇಕಾದುದು ಹಣತಾನೆ? ಪ್ರತಿ ಸೋಮವಾರವೂ ಸೂರ್ಯೋದಯಕ್ಕೆ ಸ್ವಲ್ಪ ಮುಂಚಿತವಾಗಿ, ಈ ಬದಿಯಲ್ಲಿರುವ ನದಿಯಲ್ಲಿ ಒಂದು ಮುಳುಗು ಹಾಕಿ ಮೇಲೆ ಏಳು. ಆಗ ನಿನ್ನ ಕೈಗೆ ಒಂದು ಚಿನ್ನದ ನಾಣ್ಯ ದೊರಕುತ್ತದೆ. ಸುಖವಾಗಿ ಬದುಕಿಕೊಂಡಿರು."

ಆಮೇಲೆ ಕಟ್ಟಿಗೆಯವನು ವಿಗ್ರಹವು ಹೇಳಿದ ಹಾಗೆ ಮಾಡುತ್ತ, ಪ್ರತಿ ಸೋಮವಾರವೂ ಒಂದೊಂದು ಬಂಗಾರದ ನಾಣ್ಯ ಸಂಪಾದಿಸಿ, ಹೀಗೆ ಶ್ರೀಮಂತನಾಗುತ್ತಿದ್ದಾನೆ.

ಬ್ರಾಹ್ಮಣನ ಹೆಂಡತಿ ಗಂಡನೊಂದಿಗೆ ಈ ಸಮಾಚಾರವನ್ನೆಲ್ಲಾ ಹೇಳಿ, "ಕೇಳಿದಿರಷ್ಟೆ? ನಾವು ಕೂಡಾ ಶ್ರೀಮಂತರಾಗಲು ದಾರಿ ಗೊತ್ತಾಯಿತು. ನೀವು ಕೂಡಾ ಒಂದು ಕೊಡಲಿ ತೆಗೆದುಕೊಂಡು ಆ ದೇವಾಲಯಕ್ಕೆ ಹೋಗಿ, ವಿಗ್ರಹದ ಇದಿರಿನಲ್ಲಿ ಕೊಡಲಿ ಎತ್ತಿ ತೋರಿಸಿರಿ. ಆಮೇಲೆ ನಮಗೂ ಬಂಗಾರದ ನಾಣ್ಯ ಯಾವ ದಿನ ಮುಳುಗಿದರೆ ಸಿಕ್ಕುತ್ತದೋ ಗೊತ್ತಾಗುತ್ತದೆ" ಎಂದು ಉಪಾಯ ಹೇಳಿದಳು.

ಹೆಂಡತಿಯ ಮಾತು ಬಡ ಬ್ರಾಹ್ಮಣನಿಗೆ ಮೊದಲು ಹಿಡಿಸಲಿಲ್ಲ. ದೇವರ ವಿಗ್ರಹದ ಮೇಲೆ ಕೊಡಲಿ ಎತ್ತಲು ಹೆದರಿದನು. ಅದು ಮಹಾಪಾಪವೆಂದುಕೊಂಡನು. ಮತ್ತೆ ಸ್ವಲ್ಪ ನಿಧಾನವಾಗಿ ಆಲೋಚನೆ ಮಾಡಿ ನೋಡುವಾಗ, ತನ್ನ ಹಾಗೆಯೇ ಬಡ ಮನುಷ್ಯನಾದ ಕಟ್ಟಿಗೆ ಒಡೆಯುವವನು, ಅದನ್ನು ಒಡೆಯಲು ನೋಡಿ ಲಾಭ ಸಂಪಾದಿಸುವಾಗ, ತಾನೂ ಹಾಗೆ ಮಾಡುವುದರಲ್ಲಿ ತಪ್ಪಿಲ್ಲವೆನಿಸಿ ಧೈರ್ಯ ಬಂದಿತು. ತಾನು ಧನವಂತನಾಗಲು ಅದರ ಹೊರತು ಬೇರೆ ದಾರಿಯಿಲ್ಲ. ನಿಜಕ್ಕೂ ವಿಗ್ರಹವನ್ನು ಒಡೆಯುವುದಿಲ್ಲವಷ್ಟೆ?

ರಾತ್ರಿಯಾದ ಮೇಲೆ ಬ್ರಾಹ್ಮಣನು ಕೊಡಲಿ ತೆಗೆದುಕೊಂಡು ದೇವಾಲಯಕ್ಕೆ ಹೋಗಿ, ತಾನು ಮಾಡುವುದು ದೈವ ದ್ರೋಹವೆಂದು ಹೆದರುತ್ತ, ವಿಗ್ರಹದ ಮೇಲೆ ಕೊಡಲಿಯನ್ನು ಎತ್ತಿದನು. ಆದರೆ ವಿಗ್ರಹದೊಳಗಿನಿಂದ ಯಾವ ಶಬ್ದವೂ ಹೊರಡಲಿಲ್ಲ. ಅವನು ಆಶ್ಚರ್ಯಪಡುತ್ತ, ಕೊಡಲಿಯನ್ನು ಇನ್ನಷ್ಟು ಜೋರಾಗಿ ಎತ್ತಿದನು. ಹೆದರಿಸುವಂತೆ ಕಣ್ಣು ತಿರುಗಿಸಿದನು.

ಆ ಸಮಯದಲ್ಲಿ ದೂರದಲ್ಲಿದ್ದೊಂದು ದೀಪದ ಕಾಂತಿ ವಿಗ್ರಹದ ಮುಖದ ಮೇಲೆ ಬಿತ್ತು. ವಿಗ್ರಹದ ಮುಖವು ಬ್ರಾಹ್ಮಣನಿಗೆ ಸ್ಪಷ್ಟವಾಗಿ ಕಂಡಿತು. ಅವನ ಸರ್ವಾಂಗವೂ ಕಂಪಿಸಿತು. ಕೊಡಲಿ ಕೈತಪ್ಪಿ ಬೀಳುವಾಗ ಅವನೂ ನೆಲದಲ್ಲಿ ಬಿದ್ದನು.

ಆಗ ವಿಗ್ರಹದೊಳಗಿನಿಂದ "ಅಪ್ಪಾ, ನೀನು ದೈವಭಕ್ತಿ ಉಳ್ಳವನು. ದೇವರ ವಿಷಯ ತಿಳಿದವನು, ಅಂತಹ ನೀನು ಮೂರ್ಖನಾದ ನಿನ್ನ ಪಕ್ಕದ ಮನೆಯವನ ಹಾಗೆ ಪ್ರವರ್ತಿಸಬಹುದೆ? ಅವನೇನೋ ಮೂರ್ಖತನದಿಂದ ನನ್ನ ಮೇಲೆ ಕೊಡಲಿಯಿಂದ ಹೊಡೆಯುತ್ತಿದ್ದನು, ಏಕೆಂದರೆ ಅವನ ದೃಷ್ಟಿಯಲ್ಲಿ ನಾನು ಬರೀ ಬೊಂಬೆ ಮಾತ್ರ. ನಿನ್ನಂಥವನು ಅವನಷ್ಟು ಮೂರ್ಖತೆಯನ್ನು ತೋರಿಸಬಹುದೆ? ಆ ಮೂರ್ಖನ ಮೇಲೆಯೂ, ಭಕ್ತನಾದ ನಿನ್ನ ಮೇಲೆಯೂ ದೇವರು ಒಂದೇ ವಿಧವಾಗಿರುವನೆಂದು ತಿಳಿದುದು ನಿನ್ನ ತಪ್ಪು. ಒಂದುವೇಳೆ ನನ್ನನ್ನು ಕೊಡಲಿಯಿಂದ ಹೊಡೆದಿದ್ದರೆ ನೀನು ಮಹಾಪಾಪಿಯಾಗುತ್ತಿದ್ದಿ. ಏಕೆಂದರೆ ದೇವರ ವಿಗ್ರಹವೇನೆಂಬುದರ ರಹಸ್ಯ ನಿನಗೆ ಗೊತ್ತು. ಕಟ್ಟಿಗೆ ಒಡೆಯುವವನ ಸಂಗತಿ ಬೇರೆ, ಅವನಿಗೆ ನಿನ್ನಂತಹ ಜ್ಞಾನವಿಲ್ಲ" ಎಂಬ ಮಾತುಗಳು ಮೂರ್ಛೆಯಿಂದ ಏಳುತ್ತಿದ್ದ ಬ್ರಾಹ್ಮಣನ ಕಿವಿಗೆ ನಿಚ್ಚಳವಾಗಿ ಬಿದ್ದುವು.

ಬ್ರಾಹ್ಮಣನು ಎದ್ದು ವಿಗ್ರಹಕ್ಕೆ ನಮಸ್ಕಾರ ಮಾಡಿ, ಮನೆಗೆ ಹಿಂದಿರುಗಿದನು. ಏನು ನಡೆಯಿತೆಂದು ಹೆಂಡತಿ ಕೇಳಿದಳು. ಗಂಡನು ಹೇಳಿದ ವಿವರಣೆ ಕೇಳಿದ ಮೇಲೆ, ತನ್ನಿಂದಾದ ತಪ್ಪನ್ನು ನೆನೆದು ಅವಳಿಗೂ ಪಶ್ಚಾತ್ತಾಪವಾಯಿತು.

ಇಬ್ಬರೂ ಸೇರಿ, ಆ ಪಾಳು ಗುಡಿಯ ವಿಗ್ರಹಕ್ಕೆ ದೀಪ ಬೆಳಗಿಸಿ ಹಣ್ಣು ಕಾಯಿ ಸಮರ್ಪಿಸಿ, ಪೂಜಾ ನಮಸ್ಕಾರಮಾಡಿ ಕ್ಷಮೆ ಕೇಳಿದರು. ಅದನ್ನು ನೋಡಿದ ಕೆಲವು ಜನರು ಅಲ್ಲಿಗೆ ಬರಲಾರಂಭಿಸಿದರು. ಆ ಬ್ರಾಹ್ಮಣನು ಆ ದೇವಾಲಯದ ಅರ್ಚಕನೂ ಆದನು. ಎಂದೋ ಪಾಳು ಬಿದ್ದ ಗುಡಿಯೂ, ಆ ಬ್ರಾಹ್ಮಣನ ಜೀವನವೂ ಬಹು ಚೆನ್ನಾಗಿ ಬೆಳಗತೊಡಗಿತು.





# ಪಿತೃಗೌರವ

ಅನೇಕ ವರ್ಷಗಳ ಹಿಂದೆ ಧರ್ಮಪುರದ ಅಗ್ರಹಾರದಲ್ಲಿ ಸೋಮಸುಂದರನೆಂಬೊಬ್ಬ ಗೃಹಸ್ಥನಿದ್ದನು. ಅವನಿಗೆ ಜನಾರ್ಧನನೆಂಬ ಒಬ್ಬನೇ ಮಗನಿದ್ದನು.

ಸೋಮಸುಂದರನು ಬಹಳ ಕೋಪದ ಮನುಷ್ಯ. ಮಗನನ್ನು ಯಾವಾಗಲೂ ಬೈದುಕೊಂಡೇ ಮಾತಾಡುವನು. ಜನಾರ್ಧನನು ತಂದೆಯ ಬೈಗುಳನ್ನು ಶಾಂತವಾಗಿ ಸಹಿಸಿಕೊಂಡಿರುವನೇ ಹೊರತು ತುಟಿ ಬಿಚ್ಚಿ ಇದಿರಾಡುತ್ತಿದ್ದಿಲ್ಲ.

ಜನಾರ್ಧನನಿಗೆ ಮದುವೆಯ ಪ್ರಾಯ ಬಂತು, ಆದರೆ ಯಾರೂ ಅವನಿಗೆ ಹುಡುಗಿ ಕೊಡುತ್ತೇವೆಂದು ಮುಂದೆ ಬರಲಿಲ್ಲ, ನೆರೆಯ ಊರಿನಲ್ಲಿ ಜನಾರ್ಧನನ ದೊಡ್ಡಮ್ಮನ ವರಿಸೆಯಲ್ಲಿ ಮಾವನಾಗುವ ದಂಡಪಾಣಿ ಎಂಬವನಿದ್ದನು. ಅವನಿಗೆ ಪ್ರಾಯಕ್ಕೆ ಬಂದ ಮೀನಾಕ್ಷಿ ಎಂಬ ಮಗಳೂ ಇದ್ದಳು, ಆದರೂ ದಂಡಪಾಣಿ ಜನಾರ್ಧನನಿಗೆ ತನ್ನ ಮಗಳನ್ನು ಕೊಡುವೆನೆಂದು ಹೇಳಲು ಬರಲಿಲ್ಲ.

ದಂಡಪಾಣಿಯು ಹಾಗೆಯೇ ಇನ್ನೂ ಹೆಣ್ಣು ಹೆತ್ತ ಅನೇಕರಿಗೆ ಕೂಡಾ ಜನಾರ್ಧನನ ವಿಷಯದಲ್ಲಿ ಒಂದು ಅಭಿಪ್ರಾಯ ಉಂಟಾಗಿಬಿಟ್ಟಿತ್ತು. ಅವನೊಬ್ಬ ಸಾಧುವೆಂದೂ, ಬಾಯಿಯಲ್ಲಿ ನಾಲಗೆ ಇಲ್ಲದವನೆಂದೂ, ಆದುದರಿಂದಲೇ ತಂದೆ ಅವನನ್ನು ಯಾವಾಗಲೂ ಬಯ್ದುಕೊಂಡಿರುವನೆಂದೂ ಅಂದುಕೊಳ್ಳುತ್ತಿದ್ದರು. ಹೀಗೆ ಅವನ ಮದುವೆ ಕೂಡಿಬಾರದೆ ಉಳಿದುಕೊಂಡೇ ಹೋಗುತಿತ್ತು.

ಒಂದು ದಿನ ಸೋಮಸುಂದರನು ಜನಾರ್ಧನನನ್ನು ಕರೆದು, ಒಂದು ಮುಖ್ಯ ಕೆಲಸಕ್ಕೆ, ದೂರದಲ್ಲಿರುವ ತಾಮ್ರಪುರಕ್ಕೆ ಹೋಗಲು ಹೇಳಿ, ಬರುವಾಗ ಮಾವಿನ ಹಣ್ಣುಗಳನ್ನು ಕೊಂಡುಕೊಂಡು ಬರಲು ಕಳುಹಿಸಿದನು. ಅಗ್ಗವಾಗಿದ್ದರೆ ಮಾತ್ರವೇ ಮಾವಿನ ಹಣ್ಣು ಕೊಂಡುಕೊಳ್ಳಬೇಕೆಂದು ಎಚ್ಚರಿಸಿದ್ದನು.

ಬೆಳಿಗ್ಗೆ ಗಾಡಿಯಲ್ಲಿ ತಾಮ್ರಪುರಕ್ಕೆ ಹೋದ ಜನಾರ್ಧನನು, ಕತ್ತಲೆಯಾಗುವ ಹೊತ್ತಿಗೆ ಬುಟ್ಟಿಯಲ್ಲಿ ಐವತ್ತು ಮಾವಿನ ಹಣ್ಣುಗಳನ್ನು ತೆಗೆದುಕೊಂಡು ಬಂದನು. ಆ ಹಣ್ಣುಗಳನ್ನು ಹತ್ತು ವರಹಗಳಿಗೆ ಕೊಂಡುಕೊಂಡಿರುವನೆಂದು ತಿಳಿದು ಸೋಮಸುಂದರನು ಕೋಪದಿಂದ, "ಎಷ್ಟು ಹೇಳಿದರೂ ನಿನ್ನ ಬುದ್ಧಿ ಇಷ್ಟೇ. ಈ ಜನ್ಮದಲ್ಲಿ ನಿನಗೆ ಬುದ್ಧಿ ಬರುವ ಹಾಗಿಲ್ಲ. ಅಗ್ಗದಲ್ಲಿ ಸಿಕ್ಕಿದರೆ ಮಾತ್ರ

ರಾಂಬಾಬು



ತಾರೆಂದು ಒತ್ತಿ ಒತ್ತಿ ಹೇಳಿದ್ದೇನೆ. ಐವತ್ತು ಹಣ್ಣುಗಳಿಗೆ ಹತ್ತು ವರಹ ಕೊಟ್ಟ ನಿನ್ನ ಬುದ್ಧಿಗೆ ಏನು ಹೇಳಬೇಕು ? ಅದಕ್ಕೇ ಯಾರೂ ನಿನಗೆ ಹುಡುಗಿ ಕೊಡಲು ಮುಂದೆ ಬರುವುದಿಲ್ಲ" ಎಂದನು ಫಡಫಡನೆ.

ಪ್ರಯಾಣದ ಬಳಲಿಕೆಯಲ್ಲಿದ್ದ ಜನಾರ್ಧನನು, ಬಹಳ ಶಾಂತತೆಯಿಂದಲೇ, "ಅಪ್ಪಾ, ಯಾವ ವಸ್ತುವಾದರೂ ನಮ್ಮ ಊರಿನಲ್ಲಿ ಹೆಚ್ಚು ಬೆಲೆ ಇದ್ದು ಪಕ್ಕದ ಊರಿನಲ್ಲಿ ಕಡಿಮೆ ಬೆಲೆ ಇದ್ದರೆ ಅದು ಅಗ್ಗವೆಂದು ಹೇಳುತ್ತಾರಷ್ಟೆ? ಅಸಲು ನಮ್ಮ ಊರಿನಲ್ಲಿ ಮಾವಿನಹಣ್ಣೇ ಇಲ್ಲ. ತಾಮ್ರಪುರದಲ್ಲಿ ಐವತ್ತು ಹಣ್ಣುಗಳಿಗೆ ಹದಿಮೂರು ವರಹ ಬೆಲೆ ಹೇಳಿದರು. ನಾನು ಚೌಕಾಸಿ ಮಾಡಿ ಹತ್ತು ವರಹಗಳಿಗೆ ಕೊಂಡುಕೊಂಡರೆ ದುಬಾರಿ ಬೆಲೆ ಹೇಗಾದೀತು ? ದಾರೀ ಖರ್ಚು ಗಾಡೀ ಬಾಡಿಗೆ ಎರಡು ವರಹಗಳಾಗಿವೆ" ಎಂದು ಇನ್ನೂ ಏನೇನೋ ಹೇಳಲಿದ್ದನು.

ಸೋಮಸುಂದರನು ಮತ್ತೆ ಅವನನ್ನು ಮಾತಾಡಲು ಬಿಡದೆ. "ಈ ವಿವರಗಳೆಲ್ಲ ಯಾರು ಕೇಳಿದರು ? ಒಟ್ಟಾರೆ ಬೆಲೆ ಹೆಚ್ಚೇ ಆಯಿತು. ಬಿಟ್ಟು ಬರಬೇಕಿತ್ತು" ಎಂದನು.

"ಸರಿ ಅಪ್ಪಾ, ಆ ವಿಷಯ ಬಿಡಿ. ಈಗ ಬೇರೆ ವಿಷಯ ಹೇಳುತ್ತೇನೆ. ಅಲ್ಲಿ ನಿಮಗೆ ಎರಡು ವರ್ಷಗಳಿಂದ ಕೊಡಬೇಕಾದ ಹಣ ಕೊಡದೆ ಬಾಕಿ ಮಾಡಿಕೊಂಡಿದ್ದ ರಾಮಚಂದ್ರಯ್ಯ ನನ್ನನ್ನು ನೋಡಿ ಮನೆಗೆ ಕರೆದರು. ನಿಮ್ಮ ಕ್ಷೇಮ ಸಮಾಚಾರವೆಲ್ಲಾ ಕೇಳಿ, ನೂರು ವರಹ ಕೊಟ್ಟಿದ್ದಾರೆ" ಎಂದು ಜನಾರ್ಧನನು ತಂದೆಗೆ ಹಣವನ್ನು ಕೊಟ್ಟು, "ಅಪ್ಪಾ, ಒಂದು ವಿಷಯ ಹೇಳುತ್ತೇನೆ. ನೀವು ಸುಮ್ಮಸುಮ್ಮನೆ ಇಷ್ಟಿಷ್ಟು ಉದ್ದಕ್ಕೆ ನನ್ನನ್ನು ಬಯ್ಯುತ್ತಾ ಇರುವುದರಿಂದಲೇ, ಇಲ್ಲಿಗೆ ಬರುವ ಹುಡುಗಿ ಕೂಡಾ ನಿಮ್ಮ ಬಾಯಿಯಿಂದ ಬೈಗಳು ಕೇಳಬೇಕಾಗುತ್ತದೆಂದುಕೊಂಡು, ಯಾರೂ ನನಗೆ ಹುಡುಗಿ ಕೊಡುವುದಿಲ್ಲ. ಅದು ನಿಮಗೆ ಗೊತ್ತಾಗುವುದಿಲ್ಲವೆಂಬುದಕ್ಕೇ ಹೇಳಿದೆ" ಎಂದನು.

ಆಗ ಮನೆಯೊಳಗಿಂದ ಅವನ ಮಾವ ದಂಡಪಾಣಿ ಹೊರಗೆ ಬಂದನು. ಅವನನ್ನು ನೋಡಿ ಜನಾರ್ಧನನು ಬೆರಗಾಗಿ, "ನೀವು ಯಾವಾಗ ಬಂದಿರಿ ಮಾವಯ್ಯಾ ?" ಎಂದನು.

"ಈಗತಾನೇ ಬಂದು ಮನೇ ಹಿಂದೆ ಕೈಕಾಲು ಮುಖಾ ತೊಳೀತಾ ಇದ್ದೆ. ನೀನು ತಾಮ್ರಪುರಕ್ಕೆ ಹೋಗಿರುವುದಾಗಿ ಬಾವಯ್ಯ ಹೇಳಿದರು. ಈಗ ತಾನೇ ಬಂದೆಯಾ ?" ಎಂದನು ದಂಡಪಾಣಿ.

ಮಾವನ ಪ್ರಶ್ನೆಯಿಂದ ತಾನು ತಂದೆಯೊಂದಿಗೆ ಹೇಳಿದ ಮಾತುಗಳನ್ನು ದಂಡಪಾಣಿ ಮಾವ ಕೇಳಲಿಲ್ಲವೆಂದುಕೊಂಡು, "ಹೌದು ಮಾವಾ, ಈಗತಾನೇ ಬಂದೆನು. ನೀವೇನು ಥಕ್ಕನೆ ಇಲ್ಲಿಗೆ ಬಂದದ್ದು ?" ಎಂದು ಕೇಳಿದನು.

"ನನ್ನ ಮಗಳ ಮದುವೇ ಸಮಾಚಾರ ನಿಮ್ಮೆಲ್ಲರ ಕಿವೀಗೂ ಹಾಕೋಣವೆಂತಲೇ ಬಂದೆ" ಎಂದನು ದಂಡಪಾಣಿ ನಗುತ್ತ.

"ಮೀನಾಕ್ಷೀ ಮದುವೆಯಾ? ಯಾವಾಗ? ಯಾರು ವರ?" ಎಂದನು ಆಶ್ಚರ್ಯದಿಂದ.

"ಯಾರು ವರಾ ಅಂದ್ರೇನಪ್ಪಾ! ನೀನೇ!" ಎಂದನು ದಂಡಪಾಣಿ.

ಅದನ್ನು ಕೇಳಿ ಸೋಮಸುಂದರನು ಸಂತೋಷದಿಂದ, "ಇದೇನು ಬಾವಾ! ನೀವು ಬಂದು ಬಹಳ ಹೊತ್ತಾದರೂ ಈ ಸಂಗತಿ ನನ್ನ ಮುಂದೆ ಹೇಳಲೇ ಇಲ್ಲ! ಮಗ ಬಂದ ಮೇಲೆ ಒಮ್ಮೆಗೇ ಅವನ ಹತ್ತಿರ ಹೇಳುವಿರಿ. ಇದೇನೂ ಚೆನ್ನಾಗಿಲ್ಲ ಬಾವಾ!" ಎಂದನು.

ಆ ದಿನ ರಾತ್ರಿ ಎಲ್ಲರೂ ಬಹು ಸಂತೋಷದಿಂದ ಹರಟೆ ಹೊಡೆಯುತ್ತ ಊಟ ತೀರಿಸಿದರು.

ಮರುದಿನ ದಂಡಪಾಣಿ ತನ್ನ ಮನೆಗೆ ಹಿಂದಿರುಗಿ ಹೆಂಡತಿಯೊಂದಿಗೆ, "ಜನಾರ್ಧನನೊಂದಿಗೆ ನಮ್ಮ ಮೀನಾಕ್ಷೀ ಮದುವೆಯನ್ನು ನಿಶ್ಚಯಿಸಿಕೊಂಡು ಬಂದಿದ್ದೇನೆ" ಎಂದನು.

ಅವನ ಹೆಂಡತಿ ಅತ್ಯಾಶ್ಚರ್ಯಪಡುತ್ತ, "ಇದೇನ್ರೀ ವಿಚಿತ್ರ! ನೀವು ಹೋಗುವಾಗ ಈ ವಿಷಯ ನನ್ನ ಹತ್ತಿರ ಚಕಾರ ಹೇಳ್ಲಿಲ್ಲ. ನಮ್ಮ ಹುಡುಗೀನ ಆ ಜನಾರ್ಧನನಿಗೆ ಕೊಡುವುದೆಂದರೇನ್ರೀ! ಅವನು ಬರೀ ಹೆಡ್ಡನೆಂದು ನಮಗೆಲ್ಲ ಗೊತ್ತು. ರೋಷವೇನಿಲ್ಲದ ಸಾಧು ಮೂಕ ಪ್ರಾಣಿಯಂಥವ!" ಎಂದಳು.

ದಂಡಪಾಣಿ ನಡೆದ ಸಂಗತಿಯನ್ನು ಹೆಂಡತಿಯೊಂದಿಗೆ ಹೇಳಿ, "ಅವನು ಮಾವಿನ ಹಣ್ಣಿನೊಂದಿಗೆ ಅಲ್ಲಿಗೆ ಬರುವಾಗ ನಾನು ಅಲ್ಲಿರುವ ಸಂಗತಿ ಅವನಿಗೆ ತಿಳಿಯದು. ಅವನು ತಂದೆಯೊಂದಿಗೆ ಹೇಳಿದ ಮಾತು ನಾನು ಕೇಳಿದ್ದೇನೆಂದುಕೊಂಡು, ನನ್ನನ್ನು ನೋಡಿ ಆಶ್ಚರ್ಯಬಿದ್ದನು. ಅವನು ಬಹಳ ಬುದ್ಧಿವಂತ ಗೊತ್ತಾ? ತಂದೆಯ ಮೇಲೆ ತುಂಬ ಗೌರವವಿಟ್ಟವನು. ಅದಕ್ಕೇ ಅಪ್ಪನ ಅರ್ಥವಿಲ್ಲದ ಕೋಪವನ್ನೂ, ಬೈಗುಳನ್ನೂ ಸಹಿಸಿಕೊಂಡಿರುತ್ತಾನೆ. ಅಗತ್ಯಬಿದ್ದಾಗ ತಂದೆಗೆ ಸರಿಯಾದ ಉತ್ತರ ಕೊಡುತ್ತಾನೆ. ಈ ದಿನ ನನಗೆಲ್ಲಾ ಗೊತ್ತಾಯಿತು" ಎಂದನು.

ದಂಡಪಾಣಿಯ ಹೆಂಡತಿಗೆ ಜನಾರ್ಧನನ ಮೇಲಿದ್ದ ದುರಭಿಪ್ರಾಯ ಹೋಯಿತು. ತನ್ನ ಮಗಳಿಗೆ ಅದು ಒಳ್ಳೆಯ ಸಂಬಂಧವೆಂಬ ನಂಬುಗೆಯೂ ಉಂಟಾಯಿತು. ಮತ್ತೇನು? ದಂಡಪಾಣಿಯ ಮಗಳೊಂದಿಗೆ ಜನಾರ್ಧನನ ಮದುವೆ ಸಾಂಗವಾಗಿ ನೆರವೇರಿತು.





# ಋಷಿಶಾಪ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿ ಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಒಂದು ದೊಡ್ಡ ಬ್ರಾಹ್ಮಣ ಕುಟುಂಬದಲ್ಲಿ ಜನ್ಮವೆತ್ತಿದನು. ಅವನ ತಂದೆ ಬ್ರಾಹ್ಮಣನಾದರೂ ವ್ಯಾಪಾರ ವೃತ್ತಿ ಹಿಡಿದ ವನು. ಬೆಲೆ ಬಾಳುವ ವಜ್ರಗಳನ್ನೂ, ಮಾಣಿಕ್ಯ ಗಳನ್ನೂ ವ್ಯಾಪಾರ ಮಾಡುತ್ತಿದ್ದನು. ಹೇರಳ ಲಾಭವನ್ನೂ ಗಳಿಸುತ್ತಿದ್ದನು.

ತಂದೆಯ ಇಷ್ಟದಂತೆ ಬೋಧಿಸತ್ವನು ಹದಿನಾರು ವಯಸ್ಸಿನವರೆಗೂ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿ, ಸಕಲ ವಿದ್ಯೆಗಳನ್ನೂ ಕಲಿತನು. ಗುರುಗಳು ಸಂತೋಷದಿಂದ ಅವನನ್ನು ಹರಸಿ ಕಳುಹಿಸಿದರು.

ಬೋಧಿಸತ್ವನು ಗುರುಕುಲದಿಂದ ವಿದ್ಯೆ ಮುಗಿಸಿ ಹಿಂದಿರುಗಿ ಬಂದ ಮೇಲೆ ಅವನ ತಂದೆ, "ಅಪ್ಪಾ, ನಮ್ಮ ವ್ಯಾಪಾರದಲ್ಲಿ ಜಾಗರೂಕತೆ ಇಲ್ಲದಿದ್ದರೆ ಬೇಗನೇ ಬಡವರಾಗಿ ಹೋಗುತ್ತೇವೆ. ನನ್ನ ಒಬ್ಬನೇ ಮಗನಾದ ನೀನು ವ್ಯಾಪಾರದ ಸೂಕ್ಷ್ಮತೆಗಳನ್ನು ತಿಳಿಯಬೇಕು. ಅದನ್ನು ನಾನೇ ಸ್ವತಃ ನಿನಗೆ ಕಲಿಸ ಬೇಕೆಂದಿದ್ದೇನೆ. ಅದಕ್ಕೆ ಬೇಕಾದ ಎಲ್ಲಾ ಯೋಗ್ಯತೆ ಗಳೂ ಈಗ ನಿನಗೆ ಬಂದಿವೆ" ಎಂದನು.

ಬೋಧಿಸತ್ವನು ಸಂತೋಷದಿಂದ ಒಪ್ಪಿದನು. ಮುಂದೆ ಒಂದು ವಾರ ಕಳೆದ ಮೇಲೆ, ತಂದೆಯೂ ಮಗನೂ ಬೆಲೆ ಬಾಳುವ ಮಣಿ ಮಾಣಿಕ್ಯಗಳನ್ನು ಗಂಟು ಕಟ್ಟಿಕೊಂಡು ಅಲ್ಲಲ್ಲಿ ವ್ಯಾಪಾರ ಮಾಡುತ್ತ ಕಡೆಗೆ ವಾರಣಾಸಿ ನಗರದ ದಾರಿ ಹಿಡಿದರು.

ಅನೇಕ ಗ್ರಾಮಗಳಲ್ಲಿಯೂ, ಪಟ್ಟಣಗಳಲ್ಲಿಯೂ ತಂದೆಯೂ ಮಗನೂ ಲಾಭ ಬರುವ ಹಾಗೆ ವ್ಯಾಪಾರ ಮಾಡುತ್ತಿದ್ದರು. ಹೇಗೆ ಸವಿಮಾತಿನಿಂದ ಚೌಕಾಸಿಯನ್ನು ಸಮಾಳಿಸಬೇಕೆಂಬುದನ್ನು ತಂದೆ ಮಗನಿಗೆ ತಿಳಿಯಪಡಿಸಿದನು.

ಹೀಗೆ ಅಲ್ಲಲ್ಲಿ ತಂಗಿ ವ್ಯಾಪಾರ ಮಾಡುತ್ತ ವಾರಣಾಸಿ ನಗರದ ಹತ್ತಿರ ಬರುವಾಗ ಸಂಜೆಯಾಗಿ ಹೋಯಿತು. ಸುತ್ತಲೂ ಕತ್ತಲೆ ಮುತ್ತಿಕೊಂಡು ಬರುತ್ತಿತ್ತು. ಬೇಗ ಬೇಗ ಕಾಲು ಹಾಕಿ ನಡೆದರು.

ಅವರಿಬ್ಬರೂ ನಗರದ ದ್ವಾರಪಾಲಕನ ಸಮೀಪ ಬಂದು ನಗರದೊಳಗೆ ಪ್ರವೇಶಿಸಲು ಅನುಮತಿ ಕೇಳಿದರು.

ದ್ವಾರಪಾಲಕನು ಅವರಿಬ್ಬರನ್ನೂ ಪರೀಕ್ಷಿಸಿ ನೋಡಿ, "ಅಯ್ಯಗಳಿರಾ, ನೀವು ನೋಡಿದರೆ ಧನಿಕ

ವರ್ತಕರ ಹಾಗೆ ಕಾಣುತ್ತದೆ. ಆದರೆ ರಾಜಾಜ್ಞೆಯನ್ನು ಧಿಕ್ಕರಿಸಲು ಸಾಧ್ಯವಿಲ್ಲ. ಸೂರ್ಯ ಮುಳುಗಿದ ಮೇಲೆ ಬಾಗಿಲು ಮುಚ್ಚಿ, ಮತ್ತೆ ಸೂರ್ಯೋದಯವಾಗುವವರೆಗೂ ನಗರ ದ್ವಾರಗಳನ್ನು ತೆರೆಯಬಾರದೆಂದು ರಾಜನ ಖಂಡಿತವಾದ ಆಜ್ಞೆ" ಎಂದನು.

ಈಗ ಏನು ಮಾಡುವುದೆಂಬ ಸಮಸ್ಯೆ ಆ ತಂದೆ ಮಗಂದಿರ ಮುಂದೆ ನಿಂತಿತು. ಬೋಧಿಸತ್ವನ ತಂದೆ ದ್ವಾರಪಾಲಕನೊಂದಿಗೆ. "ಅಪ್ಪಾ, ನಾವು ರಾತ್ರಿ ಹೇಗೆ ಊಟ ಮಾಡುವುದು ? ನಗರದೊಳಗೆ ಪ್ರವೇಶಿಸಿದರೆ, ಯಾವ ಛತ್ರದಲ್ಲಿಯಾದರೂ ಊಟ ಮಾಡಿ, ಹಾಯಾಗಿ ವಿಶ್ರಮಿಸಿಕೊಳ್ಳುತ್ತಿದ್ದೆವು. ಇಡೀ ರಾತ್ರಿಯನ್ನು ಉಪವಾಸದಲ್ಲಿ ಹೇಗೆ ಕಳೆಯುವುದು ? ಅದರ ಮೇಲೆ ಪ್ರಯಾಣದ ಬಳಲಿಕೆ ಬೇರೆ" ಎಂದನು.

ದ್ವಾರಪಾಲಕನಿಗೆ ಆ ತಂದೆ ಮಗಂದಿರ ಸ್ಥಿತಿಯನ್ನು ನೋಡಿ ಕನಿಕರ ಉಂಟಾಯಿತು. "ನಿಮ್ಮ ಹತ್ತಿರ ಅಡಿಗೆಗೆ ಬೇಕಾದುದೆಲ್ಲ ಇದ್ದರೆ ಇಲ್ಲಿಯೇ ಗೋಡೆಯ ಬದಿಯಲ್ಲಿರುವ ನನ್ನ ಸಣ್ಣ ಗುಡಿಸಲಿನಲ್ಲಿ ಅಡಿಗೆ ಮಾಡಿಕೊಳ್ಳಬಹುದು. ಅಷ್ಟೇ ನನ್ನಿಂದ ಸಾಧ್ಯ" ಎಂದನು.

ತಂದೆ ಮಗಂದಿರು ದ್ವಾರಪಾಲಕನು ಹೇಳಿದ ಸಣ್ಣ ಗುಡಿಸಲಿನೊಳಗೆ ಹೊಕ್ಕು ಒಂದು ಗಂಟೆ ಹೊತ್ತಿನೊಳಗೆ ಅಡಿಗೆ ಊಟ ಮುಗಿಸಿಕೊಂಡರು. ಆದರೆ ಅದು ಬಹು ಚಿಕ್ಕ ಕುಟೀರವಾದುದರಿಂದ ಅವರಿಬ್ಬರೂ ಮಲಗಿ ನಿದ್ದೆ ಮಾಡಲು ಅಲ್ಲಿ ಸ್ಥಳವೇನೂ ಇರಲಿಲ್ಲ.

ಬೋಧಿಸತ್ವನ ತಂದೆ ದ್ವಾರಪಾಲಕನಿಗೆ ಕೃತಜ್ಞತೆ ಹೇಳಿಕೊಂಡು, "ಇನ್ನು ರಾತ್ರಿಯನ್ನು ಕಳೆಯುವುದು ಹೇಗೆಂದು ತಿಳಿಯಲಿಲ್ಲ. ಯಾವುದಾದರೂ ಸ್ಥಳ ತೋರಿಸುವೆಯಾ ?" ಎಂದು ಕೇಳಿದನು.



"ಅಯ್ಯೋ, ನಗರದ ಹೊರಗೆ ಅದೋ, ಅಲ್ಲಿ ಒಂದು ಪರ್ಣಶಾಲೆ ಇದೆ. ಅದು ಭೂತ ಪ್ರೇತಗಳ ಸ್ಥಳವೆಂದು ಹೆಸರು ಪಡೆದುದರಿಂದ ಯಾವಾಗಲೂ ಖಾಲಿಯಾಗಿಯೇ ಇರುತ್ತೆ. ಅಲ್ಲಿ ಭಯವಿಲ್ಲದೆ ಮಲಗಬಹುದೆಂದು ಹೇಗೆ ಹೇಳಲಿ ?" ಎಂದನು ದ್ವಾರಪಾಲಕ.

ಭೂತಪ್ರೇತಗಳ ಮಾತನ್ನು ಕೇಳಿ, ಬೋಧಿಸತ್ವನ ತಂದೆ ಹೆದರಿಹೋದನು. ಆದರೆ ಬೋಧಿಸತ್ವನು ತಂದೆಗೆ ಧೈರ್ಯ ಹೇಳುತ್ತ, "ಅಪ್ಪಾ, ನೀವೇನೂ ಸಂಶಯಪಡಬೇಡಿ ! ಬನ್ನಿರಿ, ಅಲ್ಲಿಗೇ ಹೋಗೋಣ. ಹತ್ತು ವರ್ಷ ಕಾಲದ ವರೆಗೆ ನಾನು ಗುರುಕುಲದಲ್ಲಿ ಬಹಳ ಶ್ರಮಪಟ್ಟು ಅಭ್ಯಾಸ ಮಾಡಿದ ನನ್ನ ವಿದ್ಯೆಯ ಪ್ರಭಾವ ಎಷ್ಟೆಂಬುದು ನಿಮಗೆ ಗೊತ್ತಿಲ್ಲ !" ಎಂದನು.

ಮಗನು ಹೇಳಿದುದನ್ನು ಕೇಳಿ, ತಂದೆಗೆ ಧೈರ್ಯ ಬಂದಿತು. ಕೂಡಲೇ ಅವರಿಬ್ಬರೂ ಆ ಪರ್ಣ



ಶಾಲೆಯ ಕಡೆಗೆ ಹೋದರು. ಆಗ ಅಲ್ಲಿ ಯಾರೂ ಇರಲಿಲ್ಲ. ಇಬ್ಬರೂ ಪರ್ಣಶಾಲೆಯೊಳಗೆ ಪ್ರವೇಶಿಸಿ, ಗೋಡೆಯ ಬದಿಯಲ್ಲಿದ್ದೊಂದು ದೊಡ್ಡ ಹಾಸುಗಲ್ಲಿನ ಮಂಚದ ಮೇಲೆ ಮಲಗಿಕೊಂಡರು.

ಆ ಪರ್ಣಶಾಲೆಯಲ್ಲಿ ನರಮಾಂಸ ಭಕ್ಷಕನಾದ ಒಬ್ಬ ಯಕ್ಷನು ದ್ವಾರಬಂಧದ ಮೇಲೆ ವಾಸಮಾಡಿಕೊಂಡಿದ್ದನು. ಈ ನಡುವೆ ಕೆಲವು ದಿನಗಳಿಂದ ಅವನಿಗೆ ಆಹಾರವೇನೂ ಸಿಕ್ಕಿರಲಿಲ್ಲ. ಹಸಿವೆಯಿಂದ ಸಂಕಟಪಟ್ಟುಕೊಂಡಿದ್ದನು. ಒಮ್ಮೆಗೇ ತಂದೆಯನ್ನೂ ಮಗನನ್ನೂ ನೋಡಿದ ಕೂಡಲೇ, ಒಳ್ಳೆಯ ಆಹಾರ ದೊರಕುವುದೆಂಬ ಸಂತೋಷ ಅವನಿಗಾಯಿತು.

ಆದರೆ ಅವನಿಗೊಂದು ಋಷಿಯ ಶಾಪವಿತ್ತು. ಸಿಕ್ಕಿದ ಆಹಾರ ಇಷ್ಟದಂತೆ ತಿಂದುಬಿಡಲು ಅವನಿಂದಾಗದು. ಅವನಿಗೆ ಆಹಾರವಾಗಿ ಸಿಕ್ಕಿದವನು ಸೀನಬೇಕಿತ್ತು. ಸೀನಿದ ಕೂಡಲೇ "ಚಿರಂಜೀವ" ಎನ್ನುವುದು ವಾಡಿಕೆ. ಸೀನಿದ ಮೇಲೆ "ಚಿರಂಜೀವ!" ಎಂದು ಸೀನಿದವನಾಗಲೀ, ಮತ್ತಾರೇ ಆಗಲಿ ಹೇಳಿಬಿಟ್ಟರೆ ಯಕ್ಷನಿಗೆ ತಿನ್ನಲು ಸಾಧ್ಯವಿಲ್ಲ. ಒಂದು ನಿಮಿಷದ ವರೆಗೂ "ಚಿರಂಜೀವ" ಎಂಬ ಶಬ್ದ ಕೇಳಿಸದಿದ್ದರೆ ಮಾತ್ರ ಸೀನಿದವನನ್ನು ಹಿಡಿದು ತಿನ್ನಬಹುದಾಗಿತ್ತು.

ಈ ಕಾರಣದಿಂದ ಯಕ್ಷನು ಆ ತಂದೆ ಮಗಂದಿರಲ್ಲಿ ಯಾರಾದರೊಬ್ಬರು ಸೀನುವರೇನೋ ಎಂದು ಕಾಯುತ್ತಿದ್ದನು. ಎಷ್ಟು ಹೊತ್ತಾದರೂ ಇಬ್ಬರಲ್ಲಿ ಯಾರೊಬ್ಬರೂ ಸೀನಲಿಲ್ಲ. ಆಗ ಯಕ್ಷನು ಮೇಲಿನಿಂದ ಒಂದು ಘಾಟಾದ ಭಸ್ಮವನ್ನು ಅವರ ಮೇಲೆ ಹಾರಿಸಿದನು.

ಆ ಭಸ್ಮವು ಮೂಗಿನೊಳಗೆ ಮುಟ್ಟಿದ ಕೂಡಲೇ ಬೋಧಿಸತ್ವನ ತಂದೆ ಗಟ್ಟಿಯಾಗಿ ಸೀನಿದನು. "ಚಿರಂಜೀವ" ಎಂದು ಬೋಧಿಸತ್ವನು ಥಕ್ಕನೆ ಹೇಳಲಿಲ್ಲ.

ಯಕ್ಷನು ಬಹಳ ಸಂತೋಷಪಟ್ಟು ದ್ವಾರಬಂಧದಿಂದ ಕೆಳಕ್ಕೆ ಇಳಿದು ಬರತೊಡಗಿದನು. ಇದನ್ನೆಲ್ಲ ಗಮನಿಸಿಕೊಂಡಿದ್ದ ಬೋಧಿಸತ್ವನು ತಂದೆಯ ಬೆನ್ನು ತಟ್ಟಿ, "ಚಿರಂಜೀವ" ಎಂದನು.

ಯಕ್ಷನು ನಿರಾಶೆಯಿಂದ ಹಿಂದಿರುಗಿದನು. ಅಷ್ಟರಲ್ಲಿ ಅವನನ್ನು ಸ್ವಲ್ಪ ಕಾಡಿಸಲಿಕ್ಕಾಗಿ ಬೋಧಿಸತ್ವನು ತನ್ನ ಮೂಗಿನೊಳಗೊಂದು ಹುಲ್ಲು ಚೂರನ್ನು ಅಲುಗಾಡಿಸಿ ಗಟ್ಟಿಯಾಗಿ ಸೀನಿದನು.

ಯಕ್ಷನಿಗೆ ಮತ್ತೆ ಆಶೆಯುಂಟಾಯಿತು. ಪಕ್ಕದಲ್ಲಿದ್ದ ಇನ್ನೊಬ್ಬನು "ಚಿರಂಜೀವ" ಎನ್ನದೆ ಹೋದರೆ, ಬೋಧಿಸತ್ವನನ್ನು ತಿನ್ನಬಹುದೆಂದು ಮತ್ತೆ ಸಂತೋಷದಿಂದ ಅವರ ಬಳಿಗೆ ಬರತೊಡಗಿದನು ಯಕ್ಷ.

ಅಷ್ಟರೊಳಗೆ ಬೋಧಿಸತ್ವನ ತಂದೆ, "ಚಿರಂಜೀವ" ಎಂದು ಹೇಳಿ ಬೋಧಿಸತ್ವನ ತಲೆಯನ್ನು ತಡವಿದನು.



ಅದನ್ನು ನೋಡಿದ ಕೂಡಲೇ ಯಕ್ಷನಿಗೆ ದೊಡ್ಡ ನಿರಾಶೆಯೂ, ದೊಡ್ಡ ಕೋಪವೂ ಒಟ್ಟಿಗೇ ಬಂದಿತು. ಕೈಗೆ ಸಿಕ್ಕಿದ ತುತ್ತು ಬಾಯಿಗೆ ಬಾರದೆ ಹೋಯಿತೆಂದು ಬಹಳ ಸಂಕಟವೂ ಆಯಿತು. ಆದರೆ ಬೇರೇನೂ ಮಾಡಲಾಗದೆ, ಅಯ್ಯೋ ತನ್ನ ಗತಿಯೇ ಎಂದು ಹಳಹಳಿಸಿಕೊಂಡು ದ್ವಾರಬಂಧದ ಮೇಲೆ ಏರಿಕೊಂಡಿದ್ದಾಗ, ಬೋಧಿಸತ್ವನು "ಯಕ್ಷಾ, ಹೀಗೆ ಬಾ" ಎಂದನು ಆಜ್ಞೆ ಮಾಡುವವನ ಹಾಗೆ ಗಂಭೀರ ಕಂಠದಿಂದ.

ಯಕ್ಷನು ಹಿಂದಿರುಗಿ ಬೋಧಿಸತ್ವನನ್ನು ಪರೀಕ್ಷಿಸಿ ನೋಡಿ, ಅವನ ಮುಖದಲ್ಲಿ ಕಂಡ ತೇಜಸ್ಸಿಗೆ ಹೆದರುತ್ತ, ಕೈಕಟ್ಟಿಕೊಂಡು ಬಂದು ನಿಂತನು.

ಬೋಧಿಸತ್ವನು ಅವನನ್ನು ತೀವ್ರವಾಗಿ ನೋಡುತ್ತ, "ಯಕ್ಷಾ, ನೀನು ನರಭಕ್ಷಕ ಯಕ್ಷನೆಂದು ನನಗೆ ಗೊತ್ತಿದೆ, ನಮ್ಮಿಬ್ಬರಲ್ಲಿ ಯಾರೋ ಒಬ್ಬರನ್ನು ತಿಂದು ನಿನ್ನ ಹಸಿವೆ ತೀರಿಸಲು ನೀನು ಬರುವ ಹಾಗೆ ಪುಡಿ ಹಾಕಿದಿ. ಆದರೂ ತಿನ್ನಲಾಗದ ಹಾಗೆ ನಿನಗೇನೋ ಅಡ್ಡ ಬಂದಿದೆ. ಏನಾಗಿದೆ ನಿನಗೆ ? " ಎಂದು ಕೇಳಿದನು.

ಯಕ್ಷನು ಬೋಧಿಸತ್ವನಿಗೆ ಬಾಗಿ ನಮಸ್ಕಾರ ಮಾಡಿ, "ಮಹಾ ತೇಜಸ್ವೀ ! ನನಗೊಂದು ಶಾಪ ಇದೆ. ಆದ್ದರಿಂದ ನಿಮ್ಮಿಬ್ಬರನ್ನೂ ಮುಟ್ಟಲು ಸಾಧ್ಯವಿಲ್ಲದಾಯಿತು " ಎಂದನು.

"ಅದೆಂಥ ಶಾಪ ? ಏಕೆ ಬಂದಿತು ? ನೀನೇನು ಮಾಡಿದಿ ? " ಎಂದು ಕೇಳಿದನು ಬೋಧಿಸತ್ವ.

"ಈಗ್ಗೆ ಸುಮಾರು ಐವತ್ತು ವರ್ಷಗಳ ಹಿಂದೆ ನಾನು ಅಡವಿಯಲ್ಲಿ ಸ್ವೇಚ್ಛೆಯಾಗಿ ತಿರುಗಾಡಿಕೊಂಡಿದ್ದೆ. ಕಣ್ಣಿಗೆ ಬಿದ್ದ ಮನುಷ್ಯರನ್ನು ಹಿಡಿದು ತಿನ್ನುತ್ತಾ ಇದ್ದೆ. ಒಂದು ದಿನ ಕತ್ತಲೆಯಾಗುವ ಹೊತ್ತಿನಲ್ಲಿ ಒಂದು ನದಿಯ ಹತ್ತಿರ ಸುತ್ತಾಡುತ್ತಾ ಇದ್ದೆ. ಹೊಟ್ಟೆ ತುಂಬಿಸಿಕೊಂಡು ಮಲಗುವುದು ನನ್ನ ಉದ್ದೇಶ. ಆ ಸಮಯದಲ್ಲಿ ಮರಗಳ ಮರೆಯಲ್ಲಿ ಒಬ್ಬ ಮನುಷ್ಯ ನದಿಯ ಕಡೆಗೆ ಹೋಗುವುದು ಕಂಡಿತು. ಸದ್ದಾಗದಂತೆ ಮೆಲ್ಲನೆ ಅವನ ಹಿಂದಿನಿಂದ ಹೋಗಿ ಹಿಡಿದುಕೊಂಡೆ. ಮುಟ್ಟಿದೆನೋ ಇಲ್ಲವೋ, ವಿದ್ಯುತ್ ಘಾತವಾದ ಹಾಗೆ ನಾನೇ ಕೆಳಗೆ ಬಿದ್ದೆ."

ಬೋಧಿಸತ್ವನು ನಕ್ಕು, "ಓಹೋ ! ನಿನ್ನ ಗರ್ವಕ್ಕೆ ಸರಿಯಾದ ದಂಡನೆಯಾಯಿತೋ ? ಮನುಷ್ಯನೆಂದರೆ ಯಾರು ಏನು ಎಂಬ ಆಲೋಚನೆ ಇಲ್ಲದೆ ಮಾಡಿದ ಕೆಲಸಕ್ಕೆ ಬುದ್ಧಿ ಬಂತೋ ? ಯಾವನೋ ತಪಸ್ವಿಯನ್ನೇ ತಿಂದುಬಿಡಲು ನೋಡಿದೆಯೋ ? " ಎಂದನು

"ಮಹಾನುಭಾವಾ, ಹಾಗೆಯೇ ಆಯಿತು. ಕೆಳಗೆ ಬಿದ್ದ ನಾನು ಸ್ವಲ್ಪಹೊತ್ತಿಗೆ ಎಚ್ಚರಕ್ಕೆ ಬಂದು ಏಳಲಿಕ್ಕೆ ನೋಡುವಾಗ, ದಂಡ ಕಮಂಡಲು ಹಿಡಿದುಕೊಂಡಿದ್ದ ಆ ಋಷಿ ನನ್ನನ್ನು ಎಡದ ಕಾಲಿನಿಂದ

ತುಳಿದು 'ಎಲವೋ ಪಾಪೀ! ಈ ಪ್ರಾಂತದಲ್ಲಿ ನರಭಕ್ಷಕನಾಗಿ ತಿರುಗುವವನು ನೀನೇನಾ? ನೀನು ಮಾಡುವ ಘೋರಗಳಿಗಾಗಿ, ನೀನಿನ್ನು ಮೇಲೆ ಯಾವಾಗಲೂ ಹಸಿವಿನ ಸಂಕಟ ಅನುಭವಿಸಿಕೊಂಡೇ ಇರುವಂತೆ ಮಾಡುತ್ತೇನೆ. ಮನುಷ್ಯನಿಗೆ ಯಾವಾಗಾದರೊಮ್ಮೆ ಮಾತ್ರವೇ ಸೀನು ಬರುತ್ತದೆ. ಹಾಗೆ ಯಾರಾದರೂ ಸೀನಿಬಿಟ್ಟರೆ, ಆ ಸೀನಿದವನಾಗಲೀ ಪಕ್ಕದಲ್ಲಿದ್ದವನಾಗಲೀ ಚಿರಂಜೀವ ಎಂದು ಹೇಳದೆ ಹೋದರೆ ಮಾತ್ರ ಅಂಥವರನ್ನು ನೀನು ತಿನ್ನಬೇಕು. ಅಷ್ಟೇ ಹೊರತು ಬೇರೆ ಯಾವ ಮನುಷ್ಯರನ್ನಾದರೂ ತಿನ್ನಲು ನೋಡಿದರೆ ನೀನು ಸುಟ್ಟು ಬೂದಿಯಾಗುವಿ' ಎಂದು ಆ ಋಷಿ ನನ್ನನ್ನು ಶಪಿಸಿಬಿಟ್ಟನು" ಎಂದು ಹೇಳಿದನು ಯಕ್ಷ.

ಅದನ್ನು ಕೇಳಿ ಬೋಧಿಸತ್ವನಿಗೆ ಯಕ್ಷನ ಮೇಲೆ ಕನಿಕರ ಉಂಟಾಯಿತು. ಅವನು ಪ್ರಾಣಿಹಿಂಸೆ ಮಹಾ ಪಾಪವೆಂಬುದನ್ನು ಅವನಿಗೆ ಬೋಧಿಸಿ, ಹಣ್ಣುಹಂಪಲು, ಎಲೆಚಿಗುರು ಗಡ್ಡೆಗೆಣಸುಗಳಿಂದಲೇ ಹೊಟ್ಟೆ ತುಂಬಿಸಿಕೊಳ್ಳಬಹುದೆಂದು ಹೇಳಿದನು. ಆದರಿಂದ ಋಷಿಯ ಶಾಪವನ್ನು ಮೀರಿದಂತೆ ಆಗುವುದಿಲ್ಲವೆಂತಲೂ ತಿಳಿಯಪಡಿಸಿದನು.

ಬೆಳಗಾದ ಮೇಲೆ ಬೋಧಿಸತ್ವನು ಶಾಕಾಹಾರಕ್ಕೆ ಮಾರ್ಪಟ್ಟ ಯಕ್ಷನನ್ನು ಕೂಡಾ ಕರೆದುಕೊಂಡು, ತಂದೆಯೊಂದಿಗೆ ಕಾಶೀರಾಜ್ಯವನ್ನಾಳುವ ಮಹಾರಾಜನ ಬಳಿಗೆ ಹೋದನು.

ರಾಜನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು ಬೋಧಿಸತ್ವ. ಅದನ್ನು ಕೇಳಿ ರಾಜನು ಬೋಧಿಸತ್ವನಿಗೆ ನಮಸ್ಕಾರ ಮಾಡಿ, "ನೀವು ಮಹಾ ಶಕ್ತಿಸಂಪನ್ನರು. ನಿಮ್ಮ ಕಾರಣದಿಂದ ನನ್ನ ರಾಜ್ಯದಲ್ಲಿರುವ ಪ್ರಜೆಗಳಿಗೆ ನರಮಾಂಸ ಭಕ್ಷಕನಾದ ಯಕ್ಷನ ಕಾಟ ತಪ್ಪಿತು. ಆ ಪರ್ಣಶಾಲೆ ನಿರಪಾಯಕಾರಿ ಆಯಿತು. ನೀವು ನಮ್ಮ ಸೇನಾಧಿಪತಿಯಾಗಿ ಪದವಿ ಸ್ವೀಕರಿಸಬೇಕೆಂದು ಕೇಳಿಕೊಳ್ಳುತ್ತೇನೆ" ಎಂದನು.

ರಾಜನ ಕೇಳಿಕೆಯನ್ನು ಬೋಧಿಸತ್ವನು ಅಂಗೀಕರಿಸಿಕೊಂಡನು. ರಾಜನು ಬಹಳ ಸಂತೋಷಪಟ್ಟು ಬೋಧಿಸತ್ವನ ತಂದೆಯನ್ನು ಬಹಳವಾಗಿ ಸನ್ಮಾನಿಸಿ, ಯಕ್ಷನನ್ನು ಏನು ಮಾಡುವುದೆಂದು ಕೇಳಿದನು.

"ರಾಜಾ, ಈ ಯಕ್ಷನು ಈಗ ಪರಮ ಸಾತ್ವಿಕನಾಗಿದ್ದಾನೆ. ಇವನಿಂದ ಮನುಷ್ಯರಿಗೆ ಯಾವ ಕೆಡುಕೂ ಬಾರದು. ಇವನನ್ನು ನಿಮ್ಮ ಅಶ್ವಶಾಲೆ, ಗಜಶಾಲೆಗಳಿಗೆ ನಾಯಕನಾಗಿ ನಿಯಮಿಸಿರಿ" ಎಂದನು ಬೋಧಿಸತ್ವ.

ರಾಜನು ಅದೇ ವಿಧವಾಗಿ ಯಕ್ಷನಿಗೆ ಗಜಾಶ್ವಶಾಲೆಗಳ ಅಧಿಕಾರದ ಪದವಿ ಕೊಟ್ಟನು.





## ನಮ್ಮ ನದಿಗಳು :

# ಕಾವೇರಿ

ಚೋಳಮಂಡಲವನ್ನು ತೊಂಡಮಾನನು ಪಾಲಿಸಿಕೊಂಡಿದ್ದ ಕಾಲದಲ್ಲಿ ಒಂದು ಸಾರಿ ತೀವ್ರವಾದ ಬರಗಾಲವು ಬಂದುಬಿಟ್ಟಿತು. ಒಂದು ಹನಿಯೂ ಉದುರದೆ ವರ್ಷರ್ತು ಕಳೆದು ಹೋಯಿತು. ನದಿ, ತಟಾಕಗಳೆಲ್ಲ ಒಣಗಿಹೋದುವು. ಜನರೆಲ್ಲ ಹೇಳಲಾಗದಷ್ಟು ಕಷ್ಟಕ್ಕೆ ಬಿದ್ದರು.

ಪ್ರಜೆಗಳ ಸಂಕಟಗಳನ್ನು ನೋಡಲಾಗದೆ, ರಾಜನಾದ ತೊಂಡಮಾನನು ಏನೂ ತೋರದೆ ಬಹಳ ಚಿಂತೆಗೆ ಬಿದ್ದನು. ರಾಜಭೋಗಗಳಲ್ಲಿ ಸ್ವಲ್ಪವೂ ಆಸಕ್ತಿ ಇಲ್ಲದೆ, ಹಗಲೂ ರಾತ್ರಿಯೂ ಕ್ಷಾಮದ ಕಾಟವನ್ನು ಕುರಿತೇ ಆಲೋಚಿಸುತ್ತಿದ್ದನು ರಾಜ.





ಬರಗಾಲದ ಸಮಸ್ಯೆಯನ್ನು ಹೇಗಾದರೂ ಹೋಗಲಾಡಿಸಬೇಕೆಂದುಕೊಂಡು ಆ ರಾಜನು ಸಾಧಾರಣ ಪೌರನ ವೇಷದಲ್ಲಿ ರಾಜ್ಯದಲ್ಲೆಲ್ಲಾ ತಿರುಗಾಡಿ ನೋಡಿದನು. ಆದರೂ ಸಮಸ್ಯೆಯ ಪರಿಹಾರಕ್ಕೆ ದಾರಿ ಕಾಣಲಿಲ್ಲ. ಕಣ್ಣಿಗೆ ಬಿದ್ದ ದಾರುಣ ದೃಶ್ಯಗಳಿಂದ ಮತ್ತಷ್ಟು ವಿಷಾದಕ್ಕೇ ಬಿದ್ದನು ರಾಜ.




ಆ ಸಮಯದಲ್ಲಿ ಅಗಸ್ತ್ಯ ಮಹಾಮುನಿ ಸಹ್ಯಾದ್ರಿ ಪರ್ವತದಲ್ಲಿ ಸ್ವಲ್ಪ ಕಾಲದವರೆಗೆ ತಪಸ್ಸು ಮಾಡಿಕೊಂಡಿದ್ದನು. ಆತನು ತಪಸ್ಸನ್ನು ಮುಗಿಸಿ ಪ್ರಜೆಗಳಿಗೆ ಏನಾದರೂ ಒಳಿತು ಮಾಡಬೇಕೆಂಬ ಉದ್ದೇಶದಲ್ಲಿ ಪರ್ವತ ಪ್ರದೇಶದಿಂದ ಸಾನುಭೂಮಿಗೆ ಬಂದನು.

ಚೋಳ ಮತ್ತು ಕೊಡಗು ರಾಜ್ಯಗಳ ಸರಿಹದ್ದಿನಲ್ಲಿ ರಾಜಾ ತೊಂಡಮಾನನು ಅಗಸ್ತ್ಯಮುನಿಯ ದರ್ಶನ ಮಾಡಿದನು. ಪ್ರಜೆಗಳ ಕಷ್ಟಗಳನ್ನು ನೋಡಿ ರಾಜನಿಗಿರುವ ಚಿಂತೆಯನ್ನು ಅಗಸ್ತ್ಯನು ತಿಳಿದು, ಅದಕ್ಕೆ ಏನಾದರೂ ಪರಿಹಾರ ತೋರಿಸಬೇಕೆಂದು ಅಂದುಕೊಂಡನು.





ಆ ಕಾಲದಲ್ಲಿ ಕೊಡಗು ರಾಜ್ಯವನ್ನು ಕಾವೇರನೆಂಬ ರಾಜನು ಪಾಲಿಸುತ್ತಿದ್ದನು. ಅಗಸ್ತ್ಯನು ತೊಂಡಮಾನನನ್ನು ಕಾವೇರ ರಾಜನ ಆಸ್ಥಾನಕ್ಕೆ ಕರೆದುಕೊಂಡು ಹೋಗಿ, ಸಹ್ಯಾದ್ರಿ ಪರ್ವತದ ಕಡೆಯಿಂದ ಒಂದು ನದಿ ಆವಿರ್ಭವಿಸುವುದೆಂದು ರಾಜನಿಗೆ ತಿಳಿಯಪಡಿಸಿದನು.

ಹುಟ್ಟಲಿರುವ ನದಿಯ ಪ್ರವಾಹವನ್ನು ಚೋಳ ರಾಜ್ಯಕ್ಕೆ ತಿರುಗಿಸಬೇಕೆಂದು ಅಗಸ್ತ್ಯನ ಆಶಯ. ಅದಕ್ಕೆ ಕಾವೇರ ರಾಜನು ಒಪ್ಪಿಕೊಂಡನು. ಮುನಿಯ ಆದೇಶದಂತೆ ರಾಜನು ಅನೇಕ ಮಂದಿ ಕಾರ್ಮಿಕರನ್ನು ಸಹ್ಯಾದ್ರಿ ಪರ್ವತಗಳ ಕಡೆಗೆ ನಡೆಯಿಸಿದನು.





ಅಗಸ್ತ್ಯನು ಧ್ಯಾನದಲ್ಲಿ ಕುಳಿತನು. ನೆಲದೊಳಗೆ ರೂಪಿಸಿಕೊಂಡು ಬರುವ ನದೀ ಪ್ರವಾಹವನ್ನು ಬೇಗನೆ ಉಕ್ಕಿ ಹೊರಗೆ ಬರುವಂತೆ ಪ್ರಾರ್ಥಿಸಿದನು.

ಆ ಸಮಯದಲ್ಲಿಯೇ ಅಗಸ್ತ್ಯನು ಹೇಳಿದ ಹಾಗೆ ಕಾರ್ಮಿಕರು ನದಿಯ ಪ್ರವಾಹವು ಚೋಳ ರಾಜ್ಯದ ಕಡೆಗೆ ಪಯಣಿಸುವ ವಿಧದಲ್ಲಿ, ದೊಡ್ಡ ದೊಡ್ಡ ಬಂಡೆಗಳನ್ನು ಪೇರಿಸಿ ಮಾರ್ಗವನ್ನು ರೂಪಿಸಿಕೊಂಡಿದ್ದರು.





ನಿರೀಕ್ಷಿಸುತ್ತಿದ್ದ ನೀರಿನ ಬುಗ್ಗೆ ಶುಭ ಘಳಿಗೆಯಲ್ಲಿ ಮೇಲಕ್ಕೆ ಚಿಮ್ಮಿ ಹಳ್ಳ ಕೊಳ್ಳ ಗುಡ್ಡ ಬೆಟ್ಟಗಳ ಎಡೆಯಿಂದಾಗಿ ಚೋಳ ರಾಜ್ಯದ ಕಡೆಗೆ ಪ್ರವಹಿಸ ತೊಡಗಿತು. ತೊಂಡಮಾನ ರಾಜನಿಗೆ ಪರಮಾನಂದವಾಯಿತು.

ಕಾವೇರ ರಾಜನಿಗೆ ಕಾವೇರಿ ಎಂಬ ಸುಂದರಿಯಾದ ಕುಮಾರಿಯೊಬ್ಬಳಿದ್ದಳು. ಅಗಸ್ತ್ಯನು ಹೊಸದಾಗಿ ಆವಿರ್ಭವಿಸಿದ ನದಿಗೆ ಯುವ ರಾಣಿಯ ಹೆಸರನ್ನೇ ಇಟ್ಟನು. ಆಗಿನಿಂದ ಆ ನದಿಗೆ ಕಾವೇರಿ ನದಿ ಎಂದು ಹೆಸರು ಬಂತು.






ಭಾರತ ದೇಶದೊಳಗಿನ ಎರಡು ಪ್ರಾಚೀನ ರಾಜ್ಯಗಳ ಸ್ನೇಹಕ್ಕೆ ಚಿಹ್ನೆಯಾಗಿ ಕಾವೇರಿ ನದಿ ಹರಿಯುತ್ತಿದೆ. ನಮ್ಮ ದೇಶದೊಳಗಿನ ಪವಿತ್ರವಾದ ನದಿಗಳಲ್ಲಿ ಒಂದಾದ ಕಾವೇರಿಯನ್ನು ದಕ್ಷಿಣ ಗಂಗೆ ಎಂದು ಕೂಡಾ ಹೇಳುತ್ತಾರೆ.




# ವಿದ್ಯೆಗಳ ಉಪಯೋಗ

ಒಂದು ಸಾರಿ ಒಂದಾನೊಂದು ಗ್ರಾಮದಲ್ಲಿದ್ದ ಮೂರು ಮಂದಿ ಸ್ನೇಹಿತ ಹುಡುಗರು ಗುರುಕುಲದಲ್ಲಿ ವಿದ್ಯೆ ಕಲಿಯಬೇಕೆಂದು ಹೊರಟರು. ಅಲ್ಲಿ ಗುರುಕುಲ ನಡೆಸುವವರು ಬಹುದೊಡ್ಡ ವಿದ್ವಾಂಸರಾಗಿದ್ದರು.

ಯಾರಿಗೆ ಯಾವ ವಿದ್ಯೆ ಬೇಕೋ ಅದನ್ನೇ ಮುಖ್ಯವಾಗಿ ಕಲಿಸುವುದು ಅವರ ವಿಶಿಷ್ಟತೆ.

ಒಟ್ಟಿಗೆ ಬಂದ ವಿದ್ಯಾರ್ಥಿಗಳಲ್ಲಿ ಒಬ್ಬನು ವೈದ್ಯ ಶಾಸ್ತ್ರವನ್ನು ಕಲಿಯುವೆನೆಂದನು.

ಎರಡನೆಯವನು ಜ್ಯೋತಿಷ್ಯವನ್ನು ಹಿಡಿದನು.

ಮೂರನೆಯ ಹುಡುಗ ತರ್ಕಶಾಸ್ತ್ರ ಅಭ್ಯಾಸ ಮಾಡಲು ತೊಡಗಿದನು.

ಒಂದು ದಿನ ಒಬ್ಬ ದೊಡ್ಡ ಮನುಷ್ಯನು ಗುರುಗಳ ಹತ್ತಿರ ಒಂದು ಜತೆ ಜಾತಕವನ್ನು ತಂದನು. ಅದರಲ್ಲೊಂದು ಯುವಕನ ಜಾತಕ. ಆ ಯುವಕನೊಂದಿಗೆ ತನ್ನ ಕುಮಾರಿಯ ಜಾತಕವು ಕೂಡಿ ಬಂದರೆ ಮದುವೆ ಮಾಡುವುದು ಅವನ ಉದ್ದೇಶ. "ಉಳಿದೆಲ್ಲಾ ವಿಷಯಗಳಲ್ಲಿ ತೃಪ್ತಿಕರವಾಗಿವೆ. ಜಾತಕ ಹೊಂದಿಬರುವುದೊಂದೇ ಉಳಿದುದು. ಅದನ್ನು ನೀವು ಪರೀಕ್ಷೆ ಮಾಡಿ ಸಾಧಕಬಾಧಕಗಳನ್ನು ಯಥಾಸ್ಥಿತವಾಗಿ ಹೇಳಬೇಕು" ಎಂದನು ದೊಡ್ಡ ಮನುಷ್ಯ.

ಗುರುಗಳು ಜಾತಕಗಳನ್ನು ಪರಿಶೀಲಿಸಿ ನೋಡಿ, "ಈ ಹುಡುಗನಿಗೆ ವಿವಾಹಯೋಗದೊಂದಿಗೆ, ಸ್ವಲ್ಪ ಮಟ್ಟಿಗೆ ದುಷ್ಟಗ್ರಹ ವೀಕ್ಷಣೆ ಕೂಡಾ ಇದೆ. ಮದುವೆಯಾದ ಮೂರು ತಿಂಗಳಲ್ಲಿ ಅವನು ರೋಗದಲ್ಲಿ ಬೀಳುವ ಭಯವಿದೆ. ಅದೊಂದು ತಪ್ಪಿದರೆ ಎಲ್ಲಾ ಶುಭವೇ" ಎಂದುದನ್ನು ಕೇಳಿ ದೊಡ್ಡ ಮನುಷ್ಯನು ದಿಗಿಲುಬಿದ್ದನು.

ಗುರುಗಳು ತಮ್ಮ ಮೂವರು ಶಿಷ್ಯರನ್ನು ನೋಡಿ, "ನೀವು ಕೇಳಿದಿರಷ್ಟೆ? ನೀವು ಕಲಿತ ವಿದ್ಯೆಗಳ ಪ್ರಕಾರ, ಆಲೋಚನೆಮಾಡಿ, ಈ ದೊಡ್ಡವರಿಗೆ ಮದುವೇ ವಿಷಯದಲ್ಲಿ ಯಾವ ಆಲೋಚನೆ ಹೇಳುತ್ತೀರಿ?" ಎಂದು ಕೇಳಿದನು.

ಕೂಡಲೇ ತರ್ಕಶಾಸ್ತ್ರ ಓದುವ ಶಿಷ್ಯ ಹೀಗೆಂದನು: "ಪ್ರತಿ ಜಾತಕದಲ್ಲಿಯೂ ಯಾವುದೋ ಒಂದು ಸಾರಿ ದುಷ್ಟಗ್ರಹ ವೀಕ್ಷಣೆ ಇದ್ದೇ ಇರುತ್ತದೆ. ಇತರ ವಿಷಯಗಳೆಲ್ಲ ಅನುಕೂಲವಾಗಿರುವುದರಿಂದ, ಆ



ಒಂದು ದೋಷವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ನಿಶ್ಚಿಂತೆಯಿಂದ ವಿವಾಹ ನಡೆಸಬಹುದು."

ಆಮೇಲೆ ವೈದ್ಯಶಾಸ್ತ್ರ ಕಲಿಯುವ ಶಿಷ್ಯ, "ವರನಿಗೆ ಏನೋ ರೋಗತಾನೇ ಬರುತ್ತದೆ? ಜೀವನ ಕಾಲದಲ್ಲಿ ರೋಗ ರುಜನೆಗಳು ಯಾರಿಗೆ ತಾನೇ ಬರುವುದಿಲ್ಲ? ಒಳ್ಳೆಯ ವೈದ್ಯರಿಂದ ಚಿಕಿತ್ಸೆ ಮಾಡಿಸಿಬಿಟ್ಟರೆ ಎಷ್ಟು ದಪ್ಪವಾದ ರೋಗವಾದರೂ ಗುಣವಾಗಿಬಿಡುತ್ತದೆ. ಆದ್ದರಿಂದ ಈ ಮದುವೆ ನಡೆಯಲು ಅಡ್ಡಿಯೇ ಇಲ್ಲ" ಎಂದನು.

ಆನಂತರ ಜ್ಯೋತಿಷ್ಯ ಕಲಿಯುವ ಶಿಷ್ಯನು ತನ್ನ ಅಭಿಪ್ರಾಯ ಹೇಳಿದನು. "ಅದಕ್ಕಾಗಿ ಹೆಚ್ಚಿಗೆ ತಲೆ ಕೆರೆದುಕೊಳ್ಳಬೇಕಾಗಿಲ್ಲ. ಯಾವ ಗ್ರಹದ ವೀಕ್ಷಣೆ ಚೆನ್ನಾಗಿಲ್ಲವೋ, ಆ ಗ್ರಹಕ್ಕೆ ಮದುವೆಯ ಸಮಯದಲ್ಲಿಯೇ ಶಾಂತಿ ನಡೆಸಿಬಿಟ್ಟರೆ ಗ್ರಹವೀಕ್ಷಣೆ ಸರಿಯಾಗುತ್ತದೆ. ರೋಗವೇ ಬಾರದು. ಸಂತೋಷವಾಗಿ ಮದುವೆ ನಡೆಯಲಿ."

ಗುರುಗಳು ದೊಡ್ಡ ಮನುಷ್ಯನಿಗೆ ಗ್ರಹಶಾಂತಿಯನ್ನು ಯಾವ ರೀತಿ ಆಚರಿಸಬೇಕೆಂದು ತಿಳಿಸಿ ಅವನನ್ನು ಕಳುಹಿಸಿಕೊಟ್ಟರು.

ಇದಾಗಿ ಕೆಲವು ತಿಂಗಳ ಮೇಲೆ ಒಂದು ದಿನ ಗುರುಗಳು ನೆರೆಯ ಊರಿಗೆ ಹೋಗಿದ್ದರು. ಆ ಸಮಯದಲ್ಲಿ ಗುರುಗಳ ಚಿಕ್ಕ ಮಗುವಿಗೆ ಏನೋ ಜ್ವರ ಬಂದಿತು.

ಗುರುಗಳ ಹೆಂಡತಿ ಮಗುವಿನ ಮೈಯನ್ನು ಮುಟ್ಟಿ, "ಅಯ್ಯಯ್ಯೋ! ಮಗುವಿನ ಮೈ ಕೆಂಡದ ಹಾಗಿದೆ. ಏನು ಮಾಡಬೇಕೋ ತಿಳಿಯದು. ಅಪ್ಪನೂ ಊರಲ್ಲಿಲ್ಲ. ನೀವಾದರೂ ನೋಡಿರಪ್ಪಾ" ಎಂದಳು ಮನೆಯಲ್ಲೇ ಇರುವ ಮೂವರು ಶಿಷ್ಯರನ್ನೂ ನೋಡಿ.

"ಅದಕ್ಕೇಕೆ ಇಷ್ಟು ಗಾಬರಿ ಅಮ್ಮಾ? ಮೈಮೇಲೆ ತಣ್ಣೀರು ಹಾಕಿಬಿಟ್ಟರೆ ಬಿಸಿ ತನ್ನಂತೆ ತಗ್ಗಿ ಹೋಗುತ್ತದೆ" ಎಂದು ತರ್ಕಶಾಸ್ತ್ರದ ಶಿಷ್ಯನು ಬಿಂದಿಗೆ ತೆಗೆದುಕೊಂಡು ಬಾವಿಯ ಬದಿಗೆ ಹೋದನು.

"ಜ್ಯೋತಿಷ್ಯ ಕಲಿಯುವವನು ಪಂಚಾಂಗ ತೆಗೆದುಕೊಂಡು ಮಗುವಿನ ನಾಮನಕ್ಷತ್ರಗಳಿಗೆ ತಾಳೆ ಹುಡುಕುತ್ತ, ಯಾವ ಗ್ರಹದೇವತೆಯಿಂದ ಜ್ವರ ಬಂದಿದೆಯೋ ಎಂಬುದನ್ನು ನೋಡಲು ಕುಳಿತನು.

ವೈದ್ಯಶಾಸ್ತ್ರದ ಶಿಷ್ಯ ಮಗುವನ್ನು ಪರೀಕ್ಷಿಸಿ, ತಣ್ಣೀರು ತಂದವನನ್ನು ಸುಮ್ಮನಿರಲು ಹೇಳಿ, ಔಷಧದ ಪೆಟ್ಟಿಗೆಯಿಂದ ಬೇಕಾದ ವಸ್ತುಗಳನ್ನು ತೆಗೆದು ಲೇಪ ತಯಾರಿಸಿ, ಜೇನಿನಲ್ಲಿ ಬೆರೆಸಿ ಮಗುವಿನಿಂದ ನೆಕ್ಕಿಸಿದನು.

ಆ ದಿನ ಸಾಯಂಕಾಲ ಗುರುಗಳು ಮನೆಗೆ ಬಂದರು. ಆಗ ಮಗುವಿಗೆ ಜ್ವರ ಬಿಟ್ಟುಹೋಗಿತ್ತು. ಎಂದಿನಂತೆ ಆಡಿಕೊಂಡಿದ್ದಿತು.

ಗುರುಗಳ ಹೆಂಡತಿ ನಡೆದ ಸಂಗತಿಯನ್ನೆಲ್ಲಾ ಗಂಡನೊಂದಿಗೆ ಹೇಳಿ, "ನೀವು ಈ ಶಿಷ್ಯರಿಗೆ

ಒಂದೊಂದು ಶಾಸ್ತ್ರ ಹೇಳಿಕೊಡುತ್ತಾ ಇದ್ದೀರಿ. ಜ್ಯೋತಿಷ್ಯದಿಂದ ಉಪಯೋಗವಿರುವುದು ಗೊತ್ತಾಯಿತು. ವೈದ್ಯದಿಂದಲೂ ಪ್ರಯೋಜನವಿದೆ. ಆದರೆ ಶರ್ಕಶಾಸ್ತ್ರದಿಂದ ಏನು ಪ್ರಯೋಜನವಿದೆ? ಜ್ವರ ಬಂದ ಮಗುವಿಗೆ ತಣ್ಣೀರು ಸುರಿಯಬೇಕು ಅನ್ನುತ್ತಾನೆ" ಎಂದಳು.

"ಜ್ಯೋತಿಷ್ಯವೂ, ವೈದ್ಯವೂ ಅಗತ್ಯವಿದ್ದಾಗ ಮಾತ್ರ ಉಪಯೋಗವಾಗುವಂಥಾದ್ದು. ತರ್ಕವು ಆಗಾಗ ಬೇಕಾಗುವಂಥಾದ್ದು. ನಾಳೆಯೇ ಪರೀಕ್ಷೆಗೆ ಇಡುತ್ತೇನೆ ನೋಡು" ಎಂದು ಗುರುಗಳು ಆ ಪರೀಕ್ಷೆ ಎಂತಹುದೆಂದೂ, ಆಗ ಅವಳು ಏನು ಮಾಡಬೇಕೆಂದೂ ತಿಳಿಸಿದರು.

ಮರುದಿನ ಮಧ್ಯಾಹ್ನ ಎಲ್ಲರೂ ಊಟಮಾಡುವಾಗ, ಗುರುಗಳು, "ಅಯ್ಯಯ್ಯೊ! ಗೊತ್ತಾಗದೆ ಚೌಳೀ ಬೀಜದಂಥ ವಿಷದ ಹುಳ ನುಂಗಿ ಬಿಟ್ಟೆನಪ್ಪೋ!" ಎಂದು ಕೂಗಿ ಬೋದ ತಪ್ಪಿ ಬಿದ್ದವರ ಹಾಗೆ ಗೋಡೆಗೆ ಒರಗಿ ಮರಗಟ್ಟಿ ಹೋದರು.

"ಅಯ್ಯಯ್ಯೊ! ನಿಮ್ಮ ಗುರುಗಳಿಗೆ ಏನಾಯ್ತು, ನೋಡಿರಪ್ಪಾ!" ಎಂದು ಅವರ ಹೆಂಡತಿ ಗಾಬರಿಯಿಂದ ಕೂಗಿದಳು.

ವೈದ್ಯಶಿಷ್ಯನೂ, ಜ್ಯೋತಿಷ್ಯದವನೂ ತಟ್ಟನೆದ್ದು ಕೈತೊಳೆದುಕೊಂಡರು. ವೈದ್ಯಶಿಷ್ಯ ಗುರುಗಳ ನಾಡೀ ಪರೀಕ್ಷಿಸತೊಡಗಿದನು. ಜ್ಯೋತಿಷ್ಯ ಶಿಷ್ಯ ಪಂಚಾಂಗದ ಕಟ್ಟು ಬಿಚ್ಚಿದನು. ತರ್ಕಶಾಸ್ತ್ರದ ಶಿಷ್ಯ ಮಾತ್ರ ಗುರುಗಳ ಕಡೆಗೆ ಕೆಲವುಕ್ಷಣ ನೋಡಿ, ತನ್ನ ಪಾಡಿಗೆ ಊಟ ಮಾಡಿಕೊಂಡೇ ಇದ್ದನು.

ಆಗ ಗುರುಗಳ ಹೆಂಡತಿ ಅವನೊಂದಿಗೆ, "ನೀನು ಎಂಥ ಶಿಷ್ಯನೋ! ಗುರುಗಳು ವಿಷದ ಹುಳ ನುಂಗಿ ಬೋದವಿಲ್ಲದೆ ಬಿದ್ದಿರುವಾಗ ನಿಶ್ಚಿಂತೆಯಿಂದ ಹೇಗೆ ಉಣ್ಣುತ್ತೀಯೋ!" ಎಂದಳು.

"ಗುರುಗಳು ಯಾವ ವಿಷದ ಹುಳವನ್ನೂ ನುಂಗಲಿಲ್ಲಮ್ಮಾ. ಒಂದು ಹುಳವನ್ನು ನುಂಗುತ್ತಿದ್ದೇನೆಂದು, ಅದು ವಿಷದ ಹುಳವೆಂದು, ಅದೂ ಚೌಳೀ ಬೀಜದಷ್ಟು ಇದೆ ಎಂದು ಕಣ್ಣಾರೆ ನೋಡಿ ಹೇಳಿದವರು ನಿಜಕ್ಕೂ ನುಂಗುತ್ತಾರೆಯೇ? ತಿಳಿಯದೆ ನುಂಗುವಾಗ ಏನಾದರೂ ಅಡ್ಡ ಬಂದರೆ ಕೂಡಲೇ ಉಗುಳಿಬಿಡುತ್ತಾರೆ. ನಮ್ಮ ಗುರುಗಳು ಊಟದಲ್ಲಿ ಪಾಠ ಕಲಿಸಲು ಹೀಗೆ ಮಾಡಿದ್ದಾರು." ಎಂದನು ತಾರ್ಕಿಕ ಶಿಷ್ಯ.

ಗುರುಗಳು ಕಣ್ಣು ತೆರೆದು ಸರಿಯಾಗಿ ಕುಳಿತು, ಹೆಂಡತಿಯನ್ನು ನೋಡಿ, "ನೋಡಿದೆಯಾ ತರ್ಕದಿಂದಾಗುವ ಉಪಯೋಗ?" ಎಂದರು.

ಹೀಗೆ ಮೂವರು ಶಿಷ್ಯರೂ ಆ ಗುರುಗಳ ಹತ್ತಿರ ಕಲಿತು ಮುಗಿಸಿ ತಮ್ಮ ಊರಿಗೆ ಹೋದರು.



# ಯಾರೊಂದಿಗೆ ಸ್ನೇಹ?

ಬಹು ದೊಡ್ಡ ಮೇಧಾವಿ ಎಂದು ಹೆಸರು ಪಡೆದ ಅವಂತಿ ರಾಜ್ಯದ ಮಂತ್ರಿ ಅಕಸ್ಮಾತ್ತಾಗಿ ತೀರಿಹೋದನು. ಅವನಂತಹ ಮೇಧಾವಿಯನ್ನೇ ಮಂತ್ರಿಯಾಗಿ ನಿಯಮಿಸಿಕೊಳ್ಳಬೇಕೆಂದು ರಾಜನ ಮನಸ್ಸು. ಆ ಪದವಿಗಾಗಿ ರಾಮಶರ್ಮ, ಕೃಷ್ಣಶರ್ಮ, ಅನಂತಶರ್ಮ ಎಂಬ ಮೂವರು ಬಂದಿದ್ದರು.

ರಾಜನು ಮೊದಲು ರಾಮಶರ್ಮನನ್ನು ಕರೆಯಿಸಿ, "ನಮ್ಮ ನೆರೆರಾಜ್ಯಗಳ ವೀರಸೇನನೂ, ಶಕ್ತಿಸೇನನೂ ಪರಸ್ಪರ ಬದ್ಧ ವೈರಿಗಳು. ಅವರು ಈಗ ನನ್ನ ಸ್ನೇಹಕ್ಕಾಗಿ ದೂತರನ್ನು ಕಳಿಸಿದ್ದಾರೆ. ಅವರಲ್ಲಿ ವೀರಸೇನನು ಬಲಿಷ್ಠನು. ಶಕ್ತಿಸೇನನು ದುರ್ಬಲನು. ನಾನು ಒಬ್ಬರೊಂದಿಗೆ ಸ್ನೇಹಕ್ಕೆ ಒಪ್ಪಿಕೊಂಡರೆ ಇನ್ನೊಬ್ಬರಿಗೆ ಕೋಪ ಬರುತ್ತದೆ. ಈಗ ಏನು ಮಾಡಬೇಕು ?" ಎಂದು ಕೇಳಿದನು.

"ತಾವು ಬಲವಂತನಾದ ವೀರಸೇನನೊಂದಿಗೆ ಸ್ನೇಹ ಮಾಡಬಹುದು. ದುರ್ಬಲನ ಸ್ನೇಹದಿಂದ ಪ್ರಯೋಜನವೇನಿಲ್ಲ" ಎಂದನು ರಾಮಶರ್ಮ.

ರಾಜನು ಅವನನ್ನು ಕಳುಹಿಸಿ, ಕೃಷ್ಣಶರ್ಮನನ್ನು ಕರೆಯಿಸಿ, ರಾಮಶರ್ಮನಿಗೆ ಹೇಳಿದಂತೆಯೇ ಹೇಳಿದನು. ಅದಕ್ಕೆ ಕೃಷ್ಣಶರ್ಮನು, "ತಾವು ದುರ್ಬಲನಾದ ಶಕ್ತಿಸೇನನೊಂದಿಗೆ ಸ್ನೇಹ ಮಾಡುವುದು ಒಳ್ಳೆಯದು. ನಮಗಿಂತ ಹೆಚ್ಚು ಬಲವಂತನೊಂದಿಗೆ ಸ್ನೇಹವು, ಮೊಲವು ತೋಳದೊಂದಿಗೆ ಸ್ನೇಹ ಮಾಡಿಕೊಂಡ ಹಾಗೆ ಆದೀತು" ಎಂದನು.

ರಾಜನು ಅವನನ್ನು ಕೂಡಾ ಕಳುಹಿಸಿ, ಅನಂತಶರ್ಮನನ್ನು ಕರೆಯಿಸಿ, ಮೊದಲಿನ ಇಬ್ಬರಿಗೆ ಕೇಳಿದ ಪ್ರಶ್ನೆಯನ್ನೇ ಅವನಿಗೂ ಕೇಳಿದನು.

ಅದಕ್ಕೆ ಅನಂತಶರ್ಮನು, "ತಾವು ಅವರಲ್ಲಿ ಯಾರ ಸ್ನೇಹವನ್ನೂ ಮಾಡಿಕೊಳ್ಳಬಾರದು. ದುರ್ಬಲನಾದ ಶಕ್ತಿಸೇನನು ನಿಮ್ಮ ಸಹಾಯದಿಂದ ವೀರಸೇನನನ್ನು ಹತಮಾಡಲು ತಂತ್ರ ನಡೆಸಬಹುದು. ಆಗ ವೀರಸೇನನು ನಿಮಗೆ ಶತ್ರುವಾಗುತ್ತಾನೆ" ಎಂದನು.

"ಹಾಗಾದರೆ ಅವರಿಬ್ಬರಿಗೂ ಕೋಪ ಬಾರದಂತೆ ಅವರನ್ನು ಹಿಂದೆ ಕಳುಹಿಸುವುದು ಹೇಗೆ ?" ಎಂದು ಕೇಳಿದನು ರಾಜ.

"ಅದು ಬಹಳ ಸುಲಭ ಮಹಾರಾಜಾ. ಶಕ್ತಿಸೇನನೊಂದಿಗೆ ರಾಜೀ ಮಾಡಿಕೊಂಡು ಬಂದರೆ ವೀರಸೇನನೊಂದಿಗೆ ಸ್ನೇಹದ ಒಪ್ಪಂದ ಮಾಡಿಕೊಳ್ಳಬಹುದೆಂದು ಅವನ ದೂತನಿಗೆ ಹೇಳಿರಿ. ವೀರಸೇನನೊಂದಿಗೆ ಸ್ನೇಹ ಮಾಡಿಕೊಂಡು ಬಂದರೆ ಶಕ್ತಿಸೇನನೊಂದಿಗೆ ಸ್ನೇಹಮಾಡುವೆನೆಂದು ಅವನ ದೂತನಿಗೆ ಹೇಳಿರಿ. ಇದರಿಂದ ಯಾರಿಗೂ ತಮ್ಮ ಮೇಲೆ ಕೋಪ ಬಾರದು" ಎಂದನು ಅನಂತಶರ್ಮ.

ರಾಜನು ಅನಂತಶರ್ಮನನ್ನೇ ಮಂತ್ರಿಯಾಗಿ ಇಟ್ಟುಕೊಂಡನು.

—ಪಿ. ಆರ್. ಸುಬ್ರಹ್ಮಣ್ಯ





# ತಾಂತ್ರಿಕನ ಗರ್ವ

ಒಂದು ಕಾಲದಲ್ಲಿ ಚಂದ್ರಗಿರಿ ಮತ್ತು ಮಿತ್ರಪುರ ರಾಜ್ಯಗಳು ನೆರೆಹೊರೆ ದೇಶಗಳಾಗಿದ್ದುವು. ಚಂದ್ರಗಿರಿ ದೊಡ್ಡ ದೇಶವೂ ಅಲ್ಲ; ಹೆಚ್ಚು ಬಲಿಷ್ಠವಾದುದೂ ಅಲ್ಲ. ಚಂದ್ರಗಿರಿಗಿಂತಲೂ ಮಿತ್ರಪುರವು ಎಲ್ಲಾ ವಿಧದಲ್ಲಿಯೂ ಬಲಿಷ್ಠವಾದ ದೇಶ. ಚಂದ್ರಗಿರಿಯ ರಾಜನಾದ ರುದ್ರಸೇನನ ಹೆಂಡತಿ ಮಿತ್ರಪುರ ರಾಜನ ಸಹೋದರಿಯಾದುದರಿಂದ, ರುದ್ರಸೇನನಿಗೆ ಮಿತ್ರಪುರದ ರಾಜನಿಂದ ಆಗಾಗ ದೊಡ್ಡ ದೊಡ್ಡ ಸಹಾಯಗಳು ದೊರೆಯುತ್ತಲಿದ್ದುವು.

ರುದ್ರಸೇನನಿಗೆ ಒಬ್ಬಳು ಮಗಳೂ, ಒಬ್ಬ ಮಗನೂ ಇದ್ದರು. ಕುಮಾರಿಯ ಹೆಸರು ಸುವರ್ಣ. ಮಗನಿಗೆ ವಿಜಯನೆಂದು ಹೆಸರು. ಸುವರ್ಣ ಕುಮಾರಿಗೆ ಪ್ರಾಯ ತುಂಬುವಾಗ, ವಿಜಯನಿಗೆ ಹದಿನಾಲ್ಕು ವರ್ಷ ಪ್ರಾಯ ತುಂಬಿತು. ಇಬ್ಬರೂ ಅಂದ ಚೆಂದ ತೇಜಸ್ಸುಗಳುಳ್ಳವರು. ಒಳ್ಳೆಯ ಧೈರ್ಯ ಸಾಹಸ ತುಂಬಿದವರು. ಅಕ್ಕ ತಮ್ಮಂದಿರೊಳಗೆ ಬಹಳ ಅನ್ಯೋನ್ಯತೆಯೂ ಇದ್ದಿತು.

ಚಂದ್ರಗಿರಿಯ ದಕ್ಷಿಣದಲ್ಲಿ ಸಮುದ್ರವು ಎಲ್ಲೆಯಾಗಿತ್ತು, ಸಮುದ್ರಕ್ಕೂ ಚಂದ್ರಗಿರಿ ನಗರಕ್ಕೂ ನಡುವಿನಲ್ಲಿ ಒಂದು ಪರ್ವತಶ್ರೇಣಿ ಇದ್ದಿತು. ಅಲ್ಲಿ ಕಾಡಾಡಿಗಳಾದ ಬೇಡ ಜಾತಿಯವರು ವಾಸವಾಗಿದ್ದರು. ಆ ಪರ್ವತದ ಕಣಿವೆಯಲ್ಲಿ ಒಂದು ಕಾಲದಲ್ಲಿ ಭೈರವ ಶರ್ಮನೆಂಬೊಬ್ಬ ತಾಂತ್ರಿಕನಿದ್ದನು. ಅವನ ಮಂತ್ರಶಕ್ತಿಗಳು ಬಹು ದೊಡ್ಡವೆಂದೂ, ಮನುಷ್ಯರನ್ನು ಪಕ್ಷಿಗಳಾಗಿ, ಪಕ್ಷಿಗಳನ್ನು ಮೃಗಗಳಾಗಿ ಮಾರ್ಪಡಿಸುವಂತಹ ಅದ್ಭುತ ಶಕ್ತಿ ಅವನಿಗಿತ್ತೆಂದೂ ಹೇಳುತ್ತಾರೆ. ಅನೇಕರು ಅದನ್ನು ನಂಬುತ್ತಾರೆ. ಸಾಧಾರಣ ಜನರಿಗೆ ಅಂಥವನ ಮೇಲೆ ಗೌರವಕ್ಕಿಂತಲೂ ಭಯವೇ ಹೆಚ್ಚು. ಹೀಗಾಗಿ ಆ ಕಣಿವೆ ಪ್ರಾಂತಕ್ಕೆ ಪುರಜನರಾರೂ ಹೋಗುವುದಿಲ್ಲ.

ಭೈರವ ಶರ್ಮನು ತೀರಿಹೋದ ಮೇಲೆ ಅವನ ಶಿಷ್ಯನಾದ ವಿಗಡ ಶರ್ಮನೆಂಬವನು ಆ ಕಣಿವೆಯಲ್ಲಿ ನಿವಾಸವೇರ್ಪಡಿಸಿಕೊಂಡಿದ್ದನು. ಅವನು ತನ್ನ ಗುರುವಿನ ಹಾಗೆ ಕಣಿವೆಯಲ್ಲೇ ಇರುವುದನ್ನು ಬಿಟ್ಟು, ಆಗಾಗ ಬೆಟ್ಟಗಳ ಪಕ್ಕದ ಗ್ರಾಮಗಳಿಗೆ ಹೋಗಿ ಬರುತ್ತಿದ್ದನು. ಒಂದೊಂದು ಸಾರಿ ರಾಜಪ್ರಾಸಾದದ ಕಡೆಗೂ ಹೋಗುತ್ತಿದ್ದನು. ರುದ್ರಸೇನ ರಾಜನು ಅವನ ಮೇಲೆ ಗೌರವ ತೋರಿಸುತ್ತಿದ್ದನು.

ದೇವಪ್ರಿಯ



ಅದನ್ನು ನಿಜವಾದ ಗೌರವವೆಂದು ಹೇಳಲಾಗದು. ಪರರಿಗೆ ಘಾತಮಾಡಬಲ್ಲಂತಹ ಮಂತ್ರ ಮಾಯೆಗಳನ್ನು ಕಲಿತವರ ಹತ್ತಿರ ಮನಸ್ತಾಪ ತಂದುಕೊಳ್ಳಬಾರದೆಂಬುದು ರಾಜನ ಅಭಿಪ್ರಾಯ.

ಹೀಗಿರುವಾಗ ಒಂದು ಮುಖ್ಯವಾದ ಹಬ್ಬದ ದಿನವು ಸಮೀಪಿಸತೊಡಗಿತು. ಸಾಧಾರಣವಾಗಿ ಆ ಹಬ್ಬದ ಸಮಯಕ್ಕೆ ಯುವರಾಜ ವಿಜಯನೂ, ಯುವರಾಣಿ ಸುವರ್ಣಕುಮಾರಿಯೂ ತಮ್ಮ ಸೋದರ ಮಾವನ ಮನೆಗೆ ಹೋಗುವುದು ವಾಡಿಕೆ. ಅದರಂತೆ ಈ ಸಾರಿ ಕೂಡಾ ಅಲ್ಲಿಂದ ಆಹ್ವಾನ ಬಂದಿತ್ತು. ಅಕ್ಕ ತಮ್ಮಂದಿರು ಇಬ್ಬರೂ ಮಿತ್ರಪುರಕ್ಕೆ ಪ್ರಯಾಣ ಹೊರಟರು.

ರುದ್ರಸೇನ ರಾಜನು ಅವರನ್ನು ರಥದಲ್ಲಿ ಹೋಗುವಂತೆ ಹೇಳಿದನು. ಆದರೆ ಸುವರ್ಣ ಕುಮಾರಿಯೂ, ವಿಜಯನೂ ತಾವು ಈ ಸಾರಿ ಕುದುರೆಯ ಮೇಲೆಯೇ ಹೋಗುತ್ತೇವೆಂದು ಹಟ ಹಿಡಿದರು. ಅವರಿಗೆ ಹೋಗುವ ಮಾರ್ಗಗಳು ಸರಿಯಾಗಿ ಗೊತ್ತಿದ್ದುವು. ಅದರ ಮೇಲೆ ಅವರಿಗೆ ಶ್ರಮ ಸಾಹಸಗಳು ತುಂಬಿದ ಕೆಲಸವೆಂದರೆ ಬಹಳ ಇಷ್ಟವಾಗಿತ್ತು. ಪ್ರಾಯವೂ ಅದಕ್ಕೆ ತಕ್ಕಂತಹುದೇ! ರಾಜನು ಅವರ ಇಷ್ಟದಂತೆಯೇ ಹೋಗಲು ಬಿಟ್ಟನು.

ಅವರಿಬ್ಬರಿಗೂ ಅಂಗರಕ್ಷಕರಾಗಿ ನಾಲ್ಕು ಮಂದಿ ಆಶ್ವಿಕರೂ ಹೊರಟಿದ್ದರು. ನಗರದ ಪರಿಸರಗಳನ್ನು ದಾಟುವವರೆಗೂ ಸಾಧಾರಣ ವೇಗದಲ್ಲಿ ಓಡುತ್ತಿದ್ದ ತಮ್ಮ ಕುದುರೆಗಳನ್ನು ಆಮೇಲೆ ಸುವರ್ಣ ಕುಮಾರಿಯೂ, ವಿಜಯನೂ ಅತ್ಯುತ್ಸಾಹದಿಂದ ಬಹು ವೇಗವಾಗಿ ದೌಡು ತೆಗೆಸ ತೊಡಗಿದರು. ಅವರ ಮನೋಭೀಷ್ಟದಂತೆಯೇ ಕುದುರೆಗಳೂ ಓಡುತ್ತಿದ್ದುವು. ಆ ಕಾರಣದಿಂದ ಅಂಗರಕ್ಷಕರು ಎಷ್ಟು ಪ್ರಯತ್ನಪಟ್ಟರೂ ಬಹಳ ಹಿಂದೆ ಬಿದ್ದರು. ಬರಬರುತ್ತ ಅವರಿಗೆ ಕಾಣದೆ ಹೋದರು.

ಸುವರ್ಣ ಕುಮಾರಿಯೂ, ವಿಜಯನೂ ಬೆಟ್ಟಗಳ ಪ್ರಾಂತವನ್ನು ಸೇರಿದ ಮೇಲೆ, ತಮ್ಮ ಕುದುರೆಗಳನ್ನು ನಿಲ್ಲಿಸಿ, ಅಂಗರಕ್ಷಕರಿಗಾಗಿ ಹಿಂದಿರುಗಿ ನೋಡಿದರು. ದೃಷ್ಟಿ ಹರಿಯುವಷ್ಟು ದೂರದಲ್ಲಿ ಅವರೆಲ್ಲಿಯೂ ಕಾಣಲಿಲ್ಲ.

ಈಗ ಅವರು ಸೇರಿದ ಸ್ಥಳವು ಬಂಡೆಕಲ್ಲುಗಳ ರಾಶಿಗಳಿಂದ ಕೂಡಿದ್ದಿತು. ಅಲ್ಲಲ್ಲಿ ದೊಡ್ಡ ದೊಡ್ಡ ಮರಗಳಿದ್ದವು. ದಾರಿ ಸ್ವಲ್ಪ ಮುಂದೆ ಬಳಸಿಕೊಂಡು ಹೋಗುತ್ತಿತ್ತು. ಅಲ್ಲೊಂದು ಕಡೆಯಲ್ಲಿ ದಾರಿ ಎರಡಾಗಿ ಕವಲೊಡೆಯುತ್ತಿತ್ತು. ಒಂದು ಎಡಗಡೆಗೆ ಹೋದರೆ, ಮತ್ತೊಂದು ಬಲಗಡೆಗೆ ಹೋಗುತ್ತಿತ್ತು. ಎಡಗಡೆಯ ದಾರಿಯೇ ಮಿತ್ರಪುರಕ್ಕೆ ಹೋಗುವಂತಹುದೆಂದು ಅವರಿಬ್ಬರಿಗೂ ಗೊತ್ತಿತ್ತು. ಬಲಗಡೆಯ ದಾರಿ ಮುಂದೆ ಮುಂದೆ ಇಕ್ಕಟ್ಟಾಗಿ ತಾಂತ್ರಿಕ ವಿಗಡ ಶರ್ಮನಿರುವ ಕಣಿವೆಗೆ ಹೋಗುವಂತಹುದು.

ಅವರಿಬ್ಬರಿಗೂ ಮಿತ್ರಪುರಕ್ಕೆ ಹೋಗುವ ದಾರಿ ಗೊತ್ತೇ ಇದ್ದುದರಿಂದ, ತಮ್ಮ ಅಂಗರಕ್ಷಕರಿಗೂ ಗೊತ್ತಿದೆ ಎಂದುಕೊಂಡು, ಅವರು ತಮ್ಮ ಕುದುರೆಯನ್ನು ಆ ದಾರಿಯಲ್ಲಿ ಸ್ವಲ್ಪ ನಿಧಾನವಾಗಿ ಸಾಗಿಸೋಣವೆಂದುಕೊಂಡರು. ಅಷ್ಟರಲ್ಲಿ ಅವರ ಹಿಂದಿನ ದೊಡ್ಡ ಬಂಡೆಯ ಮರೆಯಿಂದ "ಸ್ವಲ್ಪ ನಿಲ್ಲಿರಿ!" ಎಂಬ ಶಬ್ದ ಕೇಳಿಸಿತು.

ಅವರು ಆಶ್ಚರ್ಯದಿಂದ ಆ ಕಡೆಗೆ ನೋಡುವಷ್ಟರಲ್ಲಿ ವಿಗಡ ಶರ್ಮನು ಅವರ ಮುಂದೆ ಬಂದು ಮುಗುಳ್ನಗುತ್ತ ನಿಂತನು.

ಸುವರ್ಣಕುಮಾರಿಗೂ, ವಿಜಯನಿಗೂ ಅವನ ಪರಿಚಯವಿದ್ದಿತು. ಅವನು ಆಗಾಗ ತಮ್ಮ ತಂದೆಯ ಬಳಿಗೆ ಬಂದು ಹೋಗುವಾಗ ಅವರು ನೋಡಿದ್ದರು. ಆದರೆ ಅವನು ತಾಂತ್ರಿಕನೆಂಬ ಸಂಗತಿಯೂ, ಅವನು ಈ ಪ್ರಾಂತದಲ್ಲಿರುವನೆಂಬ ವಿಷಯವೂ ಅವರಿಗೆ ತಿಳಿಯದು, ಒಬ್ಬ ಯೋಗಿ ಎಂದಷ್ಟೇ ಅವನನ್ನು ತಿಳಿದಿದ್ದರು.

"ಕುದುರೆಯನ್ನಿಳಿದು ನಾನು ಕೊಡುವ ಪ್ರಸಾದ ತೆಗೆದುಕೊಳ್ಳಿರಿ. ನಿಮಗೆ ಶುಭವಾಗುತ್ತದೆ" ಎಂದನು ವಿಗಡ ಶರ್ಮ.

ರಾಜಕುಮಾರ, ಕುಮಾರಿಯರು ಕುದುರೆಯಿಂದ ಇಳಿದರು. ವಿಗಡ ಶರ್ಮನು ಅವರೊಂದಿಗೆ, "ಪ್ರಸಾದ ತೆಗೆದುಕೊಳ್ಳುವ ಮೊದಲು ಕೈಗಳನ್ನೂ ಮುಖವನ್ನೂ ತೊಳೆದುಕೊಳ್ಳಿರಿ" ಎಂದು ತನ್ನ ಕೆಂಪಗಿನ ಕಮಂಡಲುವಿಂದ ಅವರ ಕೈಗೆ ನೀರು ಎರೆದನು. ಇಬ್ಬರೂ ಆ ನೀರಿನಿಂದ ಕೈಗಳನ್ನೂ, ಮುಖಗಳನ್ನೂ ತೊಳೆದುಕೊಂಡರು. ಆ ನೀರು ಒಳ್ಳೆಯ ಪರಿಮಳದಿಂದ ಕೂಡಿತ್ತು. ಆಮೇಲೆ ವಿಗಡ ಶರ್ಮನು ಅವರಿಗೆ ಜೇನು ಬೆರೆಸಿದ ಬಾಳೆಹಣ್ಣಿನ ತುಂಡುಗಳನ್ನು ಕೊಟ್ಟನು. ಇಬ್ಬರೂ ಆ ಪ್ರಸಾದವನ್ನು ತಿಂದರು.

"ಇನ್ನು ನಿಮ್ಮ ದಾರಿ ಹಿಡಿದು ಹೊರಡಿರಿ. ನಿಮಗಿಬ್ಬರಿಗೂ ಒಳ್ಳೆಯದಾಗಲಿ. ಆಮೇಲೆ ಕಲೆತುಕೊಳ್ಳೋಣ" ಎಂದನು ವಿಗಡ ಶರ್ಮ.





ವಿಜಯನೂ, ಸುವರ್ಣ ಕುಮಾರಿಯೂ ತಮ್ಮ ಕುದುರೆಗಳನ್ನು ವೇಗವಾಗಿ ಓಡಿಸಿಕೊಂಡು ಹೋದರು. ಹಾಗೆ ಅರ್ಧ ಗಂಟೆ ಹೊತ್ತು ದಾಟಿದ ಮೇಲೆ ದಾರಿ ಇರುಕಾಗಿ ಹೋಗುವುದನ್ನು ನೋಡಿ, ವಿಜಯನು ಕುದುರೆಯನ್ನು ನಿಲ್ಲಿಸಿ, "ನಾವು ದಾರಿ ತಪ್ಪಿ ಬಂದೆವೇನು ?" ಎಂದು ಸುವರ್ಣಕುಮಾರಿಯನ್ನು ಕೇಳಿದನು.

"ನಾನೂ ಅದನ್ನೇ ಕೇಳಬೇಕೆಂದಿದ್ದೆ" ಎಂದಳು ಸುವರ್ಣಕುಮಾರಿ ಸುತ್ತಲೂ ನೋಡುತ್ತ.

ಸ್ವಲ್ಪ ದೂರದಲ್ಲಿ ದಾರಿಯ ಬದಿಯಲ್ಲಿ ಒಂದು ಮನೆ ಇರುವುದು ಸುವರ್ಣ ಕುಮಾರಿಗೆ ಕಂಡಿತು. ವಿಜಯನಿಗೆ ಅದನ್ನು ತೋರಿಸಿ, ಆ ಮನೆಯವರನ್ನು ಕೇಳಿ ಮಿತ್ರಪುರಕ್ಕೆ ಸರಿಯಾದ ದಾರಿ ತಿಳಿದು ಕೊಳ್ಳೋಣವೆಂದಳು.

ಇಬ್ಬರೂ ಆ ಮನೆಯ ಮುಂದೆ ಹೋಗಿ ಕುದುರೆಯಿಂದ ಇಳಿದು, ಒಂದು ಮರದ ಕಾಂಡಕ್ಕೆ ಕುದುರೆಗಳನ್ನು ಕಟ್ಟಿಹಾಕಿ, ಮನೆಯ ಬಾಗಿಲನ್ನು ತಟ್ಟಿದರು. ಉತ್ತರವೇನೂ ಬರಲಿಲ್ಲ, ಬಾಗಿಲು ಮಾತ್ರ ತೆರೆದು ಕೊಂಡಿತು. ಇಬ್ಬರೂ ಒಳಗೆ ಹೋದರು. ಮರು ಕ್ಷಣದಲ್ಲಿ ಬಾಗಿಲು ದಢಾಲನೆ ಮುಚ್ಚಿಕೊಂಡಿತು. ಅವರ ಇದಿರಿನಲ್ಲಿ ತಾಂತ್ರಿಕ ವಿಗಡ ಶರ್ಮನು ನಗುತ್ತಾ ನಿಂತಿದ್ದನು.

ರಾಜಕುಮಾರ ಕುಮಾರಿಯರಿಗಾದ ಆಶ್ಚರ್ಯಕ್ಕೆ ಮೇರೆ ಇರಲಿಲ್ಲ. ಆದರೆ ಅವರು ಅದನ್ನು ತೋರಿಸಲಿಲ್ಲ. ಸುವರ್ಣ ಕುಮಾರಿ ತಾಂತ್ರಿಕನೊಂದಿಗೆ, "ನಮಗೆ ಮಿತ್ರಪುರಕ್ಕೆ ಹೋಗುವ ದಾರಿ ತಪ್ಪಿ ಹೋಯಿತು. ನೀವು ಇಲ್ಲೇ ಇರುವಿರಾ ? ಇದು ನಿಮ್ಮ ಮನೆಯೇನು ? " ಎಂದಳು.

ವಿಗಡ ಶರ್ಮನು ನಗುತ್ತ, "ಯುವರಾಣೀ, ನಿಮಗೆ ದಾರಿ ತಪ್ಪಲಿಲ್ಲ, ನೀನು ಚಂದ್ರಗಿರಿಯ ರಾಣಿಯಾಗುವ ದಾರಿಯಲ್ಲಿಯೇ ನಡೆಯುತ್ತಿರುವಿ" ಎಂದನು.

"ಹಾಗೇಕೆ ಹೇಳುವಿರಿ ? ಚಂದ್ರಗಿರಿಯ ಸಿಂಹಾಸನಕ್ಕೆ ನನ್ನ ತಮ್ಮ ಈ ವಿಜಯನಿರುವನು. ಇವನ ಹೆಂಡತಿಯೇ ರಾಣಿಯಾಗುತ್ತಾಳೆ." ಎಂದಳು ಸುವರ್ಣಕುಮಾರಿ.

"ಪರಿಸ್ಥಿತಿಯ ಮಾರ್ಪಾಡಿನಿಂದ ಮತ್ತೊಬ್ಬರು ಚಂದ್ರಗಿರಿಯ ಸಿಂಹಾಸನಕ್ಕೆ ಬಂದು ನಿನ್ನನ್ನು ಮದುವೆಯಾಗಿ ರಾಣಿ ಮಾಡಬಹುದಷ್ಟೆ?" ಎಂದನು ವಿಗಡ ಶರ್ಮ.

"ಇದರಲ್ಲಿ ನನ್ನ ಇಷ್ಟವೆಂಬುದೇನೂ ಇಲ್ಲವೆನ್ನುವಿರಾ? ದಾರಿ ಕೇಳಿದರೆ ಮತ್ತೇನೋ ಹೇಳುವಿರೇಕೆ ?" ಎಂದಳು ಕುಮಾರಿ ಕೋಪದಿಂದ.

"ನಿನ್ನ ಇಷ್ಟ ಕೇಳಬೇಕಾದ ಅಗತ್ಯವೇ ಇಲ್ಲ" ಎಂದು ತಾಂತ್ರಿಕನು ಬಾಗಿಲಿನ ಕಡೆಗೆ ಹೋಗಲು, "ನಿಲ್ಲಲ್ಲಿ! ನಾವು ಒಳಗೆ ಬಂದ ಕೂಡಲೇ ಬಾಗಿಲು ಮುಚ್ಚಿದವರು ಯಾರು ? " ಎಂದನು ವಿಜಯ.

"ಆ ವಿವರಗಳನ್ನು ನೀವು ತಿಳಿಯಬೇಕಾಗಿಲ್ಲ. ಹೊರಗೆ ಹೋಗಲು ನಿಮಗೆ ಸಾಧ್ಯವೂ ಇಲ್ಲ" ಎಂದವನೇ ವಿಗಡ ಶರ್ಮನು ಬಾಗಿಲು ತೆರೆದು ಹೊರಗೆ ಹಾರಿ, ಬಾಗಿಲು ಮುಚ್ಚಿಬಿಟ್ಟನು.

"ಅರೆ! ನಾವಿಬ್ಬರೂ ಈ ದುಷ್ಟನ ಬಂದಿಗಳಾಗಿ ಬಿಟ್ಟೆವು" ಎಂದನು ವಿಜಯ.

ಸುವರ್ಣಕುಮಾರಿ ಹಲ್ಲು ಕಡಿಯುತ್ತ, ಕೋಣೆಯ ಮತ್ತೊಂದು ಬದಿಯಲ್ಲಿರುವ ಬಾಗಿಲನ್ನು ತೆರೆದಳು. ಅಲ್ಲಿ ವಿಶಾಲವಾದ ಆವರಣದಲ್ಲಿ ಕ್ಷುದ್ರ ದೇವತೆಯ ಭಯಂಕರ ರೂಪದ ವಿಗ್ರಹವಿರುವುದನ್ನು ನೋಡಿದರು. ಇಬ್ಬರೂ ಒಂದೆರಡು ಕ್ಷಣ ಕಂಪಿಸಿದರು.



ಆ ವಿಗ್ರಹದ ಬದಿಯಲ್ಲಿರುವ ಗೋಡೆಯಲ್ಲಿ ಒಂದು ಕಿಟಕಿ ಇದ್ದಿತು. ವಿಜಯನೂ, ಸುವರ್ಣ ಕುಮಾರಿಯೂ ಆ ಕಿಟಕಿಯ ಬಳಿಗೆ ಹೋಗಿ ಬಗ್ಗಿ ನೋಡಿದರು. ಹೊರಗೆ ವಿಕೃತಾಕಾರನಾದ ಕಬ್ಬಿಣದ ಗುಂಡಿನಂತೆ ಕಪ್ಪಗಿನ ಶರೀರದಿಂದ ಬಲಿಷ್ಠನಾಗಿ ಕಾಣುವ ಕುಬ್ಜನೊಬ್ಬನಿದ್ದನು.

"ಏನಪ್ಪಾ, ಸ್ವಲ್ಪ ಬಾಗಿಲು ತೆರೆಯುವಿಯಾ? ನೀನು ಕೇಳುವ ಬಹುಮಾನ ಕೊಡುತ್ತೇವೆ" ಎಂದನು ವಿಜಯ, ಅವನಿಗೆ ಕೇಳಿಸುವ ಹಾಗೆ.

ಕುಬ್ಜಬಂಟ ವಿಕಟವಾಗಿ ನಗುತ್ತ, "ಬಾಗಿಲಿನ ಬೀಗದ ಕೈ ನನ್ನ ಯಜಮಾನನ ಹತ್ತಿರ ಇದೆ. ಮೊದಲು ಒಂದು ಕೆಲಸಮಾಡಿ. ನನಗೆ ಬಹಳ ದಾಹವಾಗಿದೆ. ದೇವತಾ ವಿಗ್ರಹದ ಹಿಂದೆ ಇರುವ ನೀರಿನ ಜಾಡಿಯನ್ನು ತಂದು ಕಿಟಕಿಯ ಸಂದಿನಿಂದ ನನಗೆ ಕೊಡಿ" ಎಂದನು.

ವಿಜಯನು ಹೋಗಿ ನೀರಿನ ಜಾಡಿಯನ್ನು ತಂದು ಆ ಕುಬ್ಜನ ಕೈಗೆ ಕೊಟ್ಟನು. ಅವನು ಅದರಲ್ಲಿಯ ನೀರನ್ನು ಕುಡಿದು ವಿಜಯನ ಮುಖ ವನ್ನು ಪರೀಕ್ಷಿಸುವಂತೆ ನೋಡುತ್ತ, "ನಾನು ನಿನ್ನ ತಲೆ ಕಡಿಯಬೇಕಾಗಿದೆ! ಅದಕ್ಕೇ ಇದನ್ನು ಕುಡಿದೆ." ಎಂದನು ಹಲ್ಲು ತೋರಿಸುತ್ತ.

ಅದನ್ನು ಕೇಳಿ ಸುವರ್ಣಕುಮಾರಿ "ಇವನ ತಲೆ ನೀನು ಕಡಿಯುವುದೆ? ಏಕೆ?" ಎಂದು ಕೇಳಿದನು.

"ನನ್ನ ಯಜಮಾನರು ದೇವಿಯನ್ನು ಒಲಿಸಲಿಕ್ಕೆ! ಆಮೇಲೆ ಅವರು ನಿನ್ನನ್ನು ಮದುವೆ ಮಾಡಿಕೊಳ್ಳು ತ್ತಾರೆ. ಆಗ ನೀನೇ ನಮಗೆಲ್ಲರಿಗೂ ರಾಣಿ. ಆಗ ನನ್ನನ್ನು ಮಾತ್ರ ಮರೆಯಬೇಡ. ನನ್ನ ಯಜಮಾನರು ನನ್ನನ್ನು ಚಂದ್ರಗಿರಿಯ ಸೇನಾಧಿಪತಿ ಮಾಡುವೆನೆಂದು ಮಾತು ಕೊಟ್ಟಿದ್ದಾರೆ" ಎಂದನು ಆ ಕುಬ್ಜ ಬಂಟ.

"ಹಾಗಾದರೆ ನನ್ನ ತಲೆ ಕಡಿಯುವವನು ನೀನೇ ಅಂತ ತಿಳಿಯಿತು" ಎಂದು ವಿಜಯನು ಅವನನ್ನು ಕೆಂಗಣ್ಣಿನಿಂದ ನೋಡಿದನು.

"ಹೌದೌದು. ನಾನೇ. ಅದಕ್ಕಾಗಿಯೇ ನಾನು ನೂರಿಪ್ಪತ್ತು ಮೇಕೆಗಳ ತಲೆ ಕಡಿದು ಒಳ್ಳೆಯ ಅಭ್ಯಾಸ ಮಾಡಿಕೊಂಡಿದ್ದೇನೆ" ಎಂದನು ಕುಬ್ಜ.



"ಪಾಪ! ಬಹಳ ಕಷ್ಟಪಟ್ಟಿರುವಿ. ನಾವು ಇಲ್ಲಿಗೆ ಬಾರದಿರುತ್ತಿದ್ದರೆ ನಿನಗೆ ಈ ಕಷ್ಟ ತಪ್ಪುತ್ತಿತ್ತು" ಎಂದನು ವಿಜಯ.

ಅದನ್ನು ಕೇಳಿ ಕುಬ್ಜನು ದೊಡ್ಡ ದನಿಯಿಂದ ನಗುತ್ತ, "ಈ ಕಣಿವೆಗೆ ನೀವು ಹೇಗೆ ಬಾರದಿರಲು ಸಾಧ್ಯ? ನನ್ನ ಯಜಮಾನರು ಕೆಂಪು ಕಮಂಡಲು ನೀರಿನಿಂದ ನಿಮ್ಮ ಮುಖ ತೊಳೆಸಿದರೋ ಇಲ್ಲವೋ? ಅದು ಮಂತ್ರದ ನೀರು. ಅದು ಯಾರ ಕಣ್ಣಿಗೆ ತಾಗಿದರೂ ಸ್ವಲ್ಪ ಹೊತ್ತಿನವರೆಗೆ ಅವರಿಗೆ ದೃಷ್ಟಿ ಮಾರ್ಪಾಟು ಬರುತ್ತೆ. ಎಡ ದಿಕ್ಕಿನಲ್ಲಿದ್ದದ್ದು ಬಲ ದಿಕ್ಕಿನಲ್ಲಿ ಕಾಣುತ್ತದೆ. ಬಲ ದಿಕ್ಕಿನಲ್ಲಿದ್ದದ್ದು ಎಡ ದಿಕ್ಕಿನಲ್ಲಿ ಕಾಣುತ್ತದೆ. ಆದ್ದರಿಂದಲೇ ನಿಮಗೆ ಎಡ ದಿಕ್ಕಿನ ದಾರಿ ಬಲ ದಿಕ್ಕಿನಲ್ಲಿರುವ ಹಾಗೆ ಕಂಡು ನೀವು ಈ ಕಣಿವೆ ಮನೆಗೆ ಬಂದಿದ್ದೀರಿ" ಎಂದು ಹೇಳಿ, ಸ್ವಲ್ಪ ತಡೆದು, "ಯುವರಾಜಾ, ನನಗೆ ದ್ರಾಕ್ಷಾರಸ ಕುಡಿದ ಕೂಡಲೇ ವಿಪರೀತ ಬಾಯಾರಿಕೆಯಾಗುತ್ತದೆ. ಈ ಜಾಡಿಯನ್ನು ಇದ್ದ ಜಾಗದಲ್ಲಿಟ್ಟು ಕುಡಿಯಲು ಸ್ವಲ್ಪ ಒಳ್ಳೆಯ ನೀರು ತಂದುಕೊಡಯ್ಯ, ಪುಣ್ಯವಂತ!" ಎಂದನು.

ಅವನ ಮಾತಿನಿಂದ ವಿಜಯನಿಗೆ ತಾಂತ್ರಿಕನ ರಹಸ್ಯವು ತಿಳಿದುಹೋಯಿತು. ಅವನು ಮೊದಲು ಕುಡಿದುದು ನೀರಲ್ಲ, ದ್ರಾಕ್ಷಾರಸ. ಅದರ ಮಯಕದಲ್ಲಿ ಗುಟ್ಟು, ರಟ್ಟು ಮಾಡಿದ್ದಾನೆ. ಈಗ ನೀರು ಕೇಳುತ್ತಿದ್ದಾನೆ. ಹೀಗೆ ಊಹಿಸಿಕೊಂಡು ವಿಜಯನು, ಕ್ಷುದ್ರದೇವತಾ ವಿಗ್ರಹದ ಮತ್ತೊಂದು ಬದಿಯಲ್ಲಿದ್ದ ನೀರಿನ ಪಾತ್ರವನ್ನು ತಂದು ಕುಬ್ಜನಿಗೆ ಕೊಟ್ಟನು.

ಕುಬ್ಜನು ಅದರೊಳಗಿದ್ದ ನೀರನ್ನು ಸ್ವಲ್ಪ ಮಾತ್ರ ಕುಡಿದು, "ಅರರೆ! ಪೂರಾ ಕುಡಿಯಬಾರದು. ನಿನ್ನ ತಲೆ ಕಡಿಯುವ ಮೊದಲು ಈ ನೀರಿನಿಂದ ಮುಖ ತೊಳೆಯಬೇಕಾಗುತ್ತದೆ" ಎಂದು ಉಳಿದ ನೀರಿನೊಂದಿಗೆ ಆ ಪಾತ್ರವನ್ನು ವಿಜಯನಿಗೆ ಕೊಟ್ಟು ಇದ್ದಲ್ಲೇ ಇಡುವಂತೆ ಹೇಳಿದನು.

ವಿಜಯನು ನೀರಿನ ಪಾತ್ರವನ್ನು ವಿಗ್ರಹದ ಹಿಂದೆ ಇಡುವ ಸಮಯದಲ್ಲಿ ಗೋಡೆಯ ಮೂಲೆಯಲ್ಲಿ ತಾಂತ್ರಿಕನ ಕೆಂಪು ಕಮಂಡಲು ಇರುವುದು ಕಂಡಿತು. ಕೂಡಲೇ ಅವನು ನೀರಿನ ಪಾತ್ರದಲ್ಲಿ ಉಳಿದಿದ್ದ ನೀರನ್ನು ಚೆಲ್ಲಿ, ಆ ಕಮಂಡಲುವಿನ ನೀರನ್ನು ಅದರೊಳಗೆ ಹಾಕಿಟ್ಟನು.

ಆಮೇಲೆ ವಿಜಯನೂ, ಸುವರ್ಣ ಕುಮಾರಿಯೂ ಮುಂದೇನಾಗುವುದೋ ಎಂದು ನೋಡುತ್ತಿರಲು, ಫಕ್ಕನೆ ಬಾಗಿಲು ತೆರೆದು ತಾಂತ್ರಿಕ ವಿಗಡ ಶರ್ಮನು ಒಳಗೆ ಬಂದು, ಅವರಿಬ್ಬರ ಮೇಲೆ ಏನೋ ಬೂದಿಯನ್ನು ಚೆಲ್ಲಿದನು.

ಮರುಕ್ಷಣದಲ್ಲಿ ಇಬ್ಬರೂ ತಲೆ ತಿರುಗಿ ಕಣ್ಣು ಕತ್ತಲೆ ಕವಿದು ನೆಲದಲ್ಲಿ ಬಿದ್ದರು. ತಾಂತ್ರಿಕನು ವಿಜಯನನ್ನು ಎತ್ತಿ ಕ್ಷುದ್ರದೇವತೆಯ ಎಡ ಬದಿ

ಯಲ್ಲಿ ಚಿಟ್ಟೆ ಮಟ್ಟೆ ಇಡಿಸಿ ಕೂಡಿಸಿ, ತಾನು ಬಲಜದಿಯಲ್ಲಿ ಹಾಗೆಯೇ ಕುಳಿತನು.

ಕುಬ್ಜನು ದೊಡ್ಡ ಕತ್ತಿಯೊಂದಿಗೆ ಅಲ್ಲಿಗೆ ಬಂದನು. ಅವನು ಮೊದಲು ತಾಂತ್ರಿಕನಿಗೆ ನಮಸ್ಕಾರ ಮಾಡಿ, ವಿಜಯನು ಮಂತ್ರಜಲ ಸುರಿದಿಟ್ಟ ನೀರಿನ ಪಾತ್ರದಲ್ಲಿರುವ ನೀರಿನಿಂದ, ತನ್ನ ಮುಖವನ್ನೂ, ಕೈಗಳನ್ನೂ ತೊಳೆದುಕೊಂಡನು.

ಆಮೇಲೆ ಕತ್ತಿಯನ್ನು ಮೇಲೆತ್ತಿ ಮುಂದಕ್ಕೆ ಹಾರಿ, ಒಂದೇ ಏಟಿಗೆ ತಲೆ ಕಡಿದು, "ಆಹಾ! ಮೊದಲು ನೂರಿಪ್ಪತ್ತು ತಲೆಗಳನ್ನು ಕಡಿದು ಅಭ್ಯಾಸ ಮಾಡಿದ್ದು ಎಷ್ಟು ಒಳ್ಳೇದಾಯಿತು! ಇನ್ನು ಓ ದೊರೇ! ನನಗೆ ಕೊಟ್ಟ ಮಾತು ಮರೆಯಬೇಡಿರಿ. ತಲೆ ಸರಿಯಾಗಿ ದೇವಿಯ ಪಾದಕ್ಕೆ ಬಿದ್ದಿದೆ!" ಎಂದು ಉತ್ಸಾಹದಿಂದ, ವಿಜಯನ ಮುಂದೆ ಸಾಷ್ಟಾಂಗ ಬಿದ್ದನು.

ಕೆಂಪು ಕಮಂಡಲದ ಮಂತ್ರ ಜಲವು ಕುಬ್ಜನ ಕಣ್ಣುಗಳಿಗೆ ತಾಗಿದುದರಿಂದ, ಎಡಗಡೆ ಬಲಗಡೆಯಾಗಿಯೂ, ಬಲಗಡೆ ಎಡಗಡೆಯಾಗಿಯೂ ಅವನಿಗೆ ಕಂಡು ಬಂದು, ಅವನು ಕಡಿದು ಹಾಕಿದ್ದು ತಾಂತ್ರಿಕ ವಿಗಡ ಶರ್ಮನ ತಲೆಯನ್ನೇ.

ತಾಂತ್ರಿಕನ ಮರಣದಿಂದ ಅವನು ವಿಜಯ ಮತ್ತು ಸುವರ್ಣಕುಮಾರಿಯರ ಮೇಲೆ ಚೆಲ್ಲಿದ ಬೂದಿಯ ಪ್ರಭಾವ ಹೋಯಿತು. ಕೂಡಲೇ ವಿಜಯನು ಎದ್ದು ಕುಬ್ಜನ ತಲೆಯ ಮೇಲೆ ಬಲವಾಗಿ ಒಂದೇಟು ಹಾಕಿದನು. ಅವನು ಸಾಯುವ ಹಾಗೆ ಕೂಗುತ್ತ ಬಿದ್ದು, ನರಳ ತೊಡಗಿದನು.

ವಿಜಯನೂ, ಸುವರ್ಣ ಕುಮಾರಿಯೂ ತಾಂತ್ರಿಕನ ಮನೆಯಿಂದ ಓಡುತ್ತಾ, ಹೊರಗೆ ಬಂದು, ತಾವು ಕಟ್ಟಿ ಹಾಕಿದ್ದ ತಮ್ಮ ಕುದುರೆಗಳ ಮೇಲೆ ಏರಿಕೊಂಡರು. ಅವರು ಮಿತ್ರಪುರದ ಸೋದರ ಮಾವಯ್ಯನ ಮನೆಗೆ ಹೋಗುವ ಆಲೋಚನೆ ಬಿಟ್ಟು, ಚಂದ್ರಗಿರಿಯ ತಮ್ಮ ಅರಮನೆಗೇ ವಾಯು ವೇಗದಿಂದ ಸಾಗಿದರು.

ಆ ಸಮಯದಲ್ಲಿ ಮಿತ್ರಪುರಕ್ಕೆ ಹೋಗಿ, ಅಲ್ಲಿ ಅವರನ್ನು ಕಾಣದೆ ಹಿಂದಿರುಗಿ ಬಂದ ಅವರ ಅಂಗರಕ್ಷಕರು, ಯುವರಾಜ ಯುವರಾಣಿಯರು ಎಲ್ಲಿ ಹೋದರೋ ತಿಳಿಯಲಿಲ್ಲವೆಂಬ ಸಂಗತಿ ಹೇಳಿಕೊಂಡಿದ್ದರು.

ತನ್ನ ಕುಮಾರ ಕುಮಾರಿಯರು ಕ್ಷೇಮವಾಗಿ ಬಂದುದನ್ನು ನೋಡುತ್ತಲೇ ರುದ್ರಸೇನ ರಾಜನಿಗೆ ಅತ್ಯಾನಂದವಾಯಿತು.

"ಮಹಾ ದುಷ್ಟನಾದ ತಾಂತ್ರಿಕನನ್ನು ಹತಮಾಡಿ ಬಂದೆವು" ಎಂದು ಕುಮಾರ ಕುಮಾರಿಯರು ನಡೆದ ಸಂಗತಿಯನ್ನೆಲ್ಲಾ ತಂದೆಯೊಂದಿಗೆ ಹೇಳಿದರು.



# ಹೊಗಳಿಕೆಗೆ ಬಾಗದವನು

ವಿಜಯಪುರ ರಾಜ್ಯವನ್ನು ವಿಜಯವರ್ಮನೆಂಬ ರಾಜನು ಪಾಲಿಸುತ್ತಿದ್ದನು. ಅವನಿಗೆ ತಾನು ಹೊಗಳಿಕೆಗೆ ಬಾಗುವವನಲ್ಲ ಎಂಬ ಗಟ್ಟಿ ನಂಬುಗೆ ಇದ್ದಿತು.

ಈ ಸಂಗತಿಯನ್ನು ಎಲ್ಲರಿಗೂ ತಿಳಿಸಬೇಕೆಂಬ ಉತ್ಸಾಹದಿಂದ, ತನ್ನನ್ನು ಹೊಗಳಿ ಮೆಚ್ಚಿಸಿದವರಿಗೆ ಲಕ್ಷ ವರಹ ಬಹುಮಾನ ಕೊಡುವೆನೆಂದು ಪ್ರಕಟ ಪಡಿಸಿದನು.

ಅನೇಕ ಮಂದಿ ಕವಿಗಳೂ, ಪಂಡಿತರೂ ರಾಜನನ್ನು ಹೊಗಳಿ ಮೆಚ್ಚಿಸಿ ಬಹುಮಾನ ಪಡೆಯಲು ಪ್ರಯತ್ನಿಸಿ ವಿಫಲರಾದರು.

ಒಂದು ದಿನ ಬಡ ಬ್ರಾಹ್ಮಣನೊಬ್ಬನು ರಾಜನ ಒಡ್ಡೋಲಗಕ್ಕೆ ಬಂದು, "ಮಹಾರಾಜಾ, ನಾನು ಎಷ್ಟೋ ಮಹಾರಾಜರನ್ನು ನೋಡಿದ್ದೇನೆ. ಪ್ರತಿಯೊಬ್ಬರೂ ಹೊಗಳಿಕೆಗೆ ಬಾಗುವವರೇ. ಹಾಗೆ ಹೊಗಳಿಕೆಗೆ ಮೈಮರೆಯದೆ, ಎಚ್ಚರದಲ್ಲಿರುವ ಮಹಾರಾಜರು ತಾವೊಬ್ಬರೇ !" ಎಂದನು.

ರಾಜನು ಆ ಮಾತಿಗೆ ಬಹಳ ಸಂತೋಷಪಟ್ಟು ಬಡ ಬ್ರಾಹ್ಮಣನಿಗೆ ನೂರು ವರಹ ಬಹುಮಾನ ಕೊಡಿಸಿದನು.

ಬ್ರಾಹ್ಮಣನು ಅದನ್ನು ತೆಗೆದುಕೊಂಡು, "ಈಗ ನೂರು ಕೊಡಿಸಿದಿರಿ, ಉಳಿದ ಬಹುಮಾನದ ಮೊತ್ತವನ್ನು ಯಾವಾಗ ಕೊಡುವಿರಿ ಪ್ರಭೂ ?" ಎಂದು ಕೇಳಿದನು.

"ಉಳಿದ ಬಹುಮಾನ ಏನದು ?" ಎಂದನು ರಾಜ ಕೋಪದಿಂದ.

"ತಮ್ಮನ್ನು ಹೊಗಳಿ ಮೆಚ್ಚಿಸಿದವರಿಗೆ ಕೊಡುವೆನೆಂದ ಬಹುಮಾನ ಪ್ರಭೂ. ನೀವು ಹೊಗಳಿಕೆಗೆ ಬಾಗುವವರಲ್ಲವೆಂದು ಈಗ ತಾನೇ ಹೊಗಳಿದೆ? ಅದಕ್ಕೆ ಮೆಚ್ಚಿ ನೂರು ವರಹ ಮಾತ್ರ ಕೊಡಿಸಿದಿರಿ" ಎಂದನು ಬ್ರಾಹ್ಮಣ, ತಾನು ಹೊಗಳಿಕೆಗೆ ಬಾಗಿದ್ದು ಅರ್ಥವಾಯಿತು ರಾಜನಿಗೆ.

ಅವನು ಲಕ್ಷ ವರಹ ತರಿಸಿ ಬ್ರಾಹ್ಮಣನಿಗೆ ಕೊಟ್ಟನು.





# ಶಿವಪುರಾಣ

ಘೋರ ತಪಸ್ಸಿನಲ್ಲಿ ಮುಳುಗಿದ ವಜ್ರಾಂಗನ ಮುಂದೆ ಒಂದು ದಿನ ಬ್ರಹ್ಮನು ಪ್ರತ್ಯಕ್ಷನಾಗಿ, "ನಿನ್ನ ತಪಸ್ಸಿಗೆ ಮೆಚ್ಚಿದೆನು. ಇನ್ನು ತಪಸ್ಸು ಸಾಕು. ಏನು ವರ ಬೇಕೆಂಬುದನ್ನು ಕೇಳು " ಎಂದನು.

" ಮಹಾದೇವಾ, ನನ್ನ ಅರ್ಧಾಂಗಿನಿಯಾದವಳು ದೇವತೆಗಳನ್ನು ಜಯಿಸತಕ್ಕ ಮಗನು ಬೇಕೆನ್ನುತ್ತಾಳೆ. ಅವಳಿಗೆ ಅಂತಹ ಮಗನು ಹುಟ್ಟುವಂತೆ ವರ ಕೊಡು " ಎಂದು ಕೇಳಿದನು ವಜ್ರಾಂಗ.

" ಹಾಗೇಯೇ ಆಗಲಿ " ಎಂದು ಬ್ರಹ್ಮನು ವರ ಕೊಟ್ಟು ಅಂತರ್ಧಾನನಾದನು.

ವಜ್ರಾಂಗನು ಮನೆಗೆ ಹಿಂದಿರುಗಿ ಬಂದು, ಬ್ರಹ್ಮನು ತನಗೆ ವರ ಕೊಟ್ಟ ಸಂಗತಿಯನ್ನು ಹೆಂಡತಿಯೊಂದಿಗೆ ಹೇಳಿದನು.

ಆಮೇಲೆ ಬೇಗದಲ್ಲೇ ಅವನ ಹೆಂಡತಿಯಾದ ವರಾಂಗಿ ಗರ್ಭವತಿಯಾಗಿ, ಹತ್ತನೆಯ ತಿಂಗಳು ಬಂದ ಮೇಲೆ ಒಂದು ದಿನ ಬೆಳಂಜಾಮದ ವೇಳೆಯಲ್ಲಿ ಒಬ್ಬ ಮಗನನ್ನು ಹೆತ್ತಳು. ಆ ಮಗನು ತ್ರಿಲೋಕ ಶೂರನಾಗುವನೆಂಬುದನ್ನು ಸೂಚಿಸುವಂತೆ, ಅವನು ಹುಟ್ಟಿದ ಕೂಡಲೇ ಭೂಮಿ ಕಂಪಿಸಿತು. ಎಲ್ಲಾ ಕಡೆಗಳಿಂದಲೂ ಅಗ್ನಿಜ್ವಾಲೆಗಳೆದ್ದುವು. ಸುಳಿಗಾಳಿ ಬೀಸಿ ದೊಡ್ಡ ದೊಡ್ಡ ಮರಗಳು ಮಗುಚಿ ಬಿದ್ದುವು. ಹದ್ದುಗಳೂ, ಗೂಗೆಗಳೂ ಕೆಟ್ಟದನಿಯಿಂದ ಅರಚಿದುವು. ಹಟ್ಟಹಗಲೇ ಉಲ್ಕೆಗಳು ಉದುರಿದುವು. ಇಂತಹ ಉತ್ಪಾತಗಳನ್ನು ನೋಡಿ ಜನರೆಲ್ಲಾ ಹೆದರಿ ನಡುಗಿದರು.

ವಜ್ರಾಂಗನೂ, ವರಾಂಗಿಯೂ ತಮ್ಮ ಮಗನಿಗೆ ತಾರಕ ಎಂದು ಹೆಸರಿಟ್ಟರು. ಬಹಳ ಮುದ್ದಿನಿಂದ ಬೆಳೆಸತೊಡಗಿದರು.

ತಾರಕನು ದಿನದಿಂದ ದಿನಕ್ಕೆ ಬಲಿಷ್ಠನಾಗುತ್ತ, ಬೆಳೆಯುತ್ತ, ಪರ್ವತಾಕಾರ ತಾಳುತ್ತ, ನೋಡುವವರಿಗೆ ಭಯ ಹುಟ್ಟುವಂತೆ ಕಾಣುತ್ತಿದ್ದನು.

ಒಂದು ದಿನ ವರಾಂಗಿ ತಾರಕನೊಂದಿಗೆ, "ಕಂದಾ, ನೀನು ಏಕಾಂತ ಪ್ರದೇಶಕ್ಕೆ ಹೋಗಿ ಬ್ರಹ್ಮನನ್ನು ಧ್ಯಾನಿಸಿ ತಪಸ್ಸು ಮಾಡಿ, ಮೂರು ಲೋಕಗಳನ್ನೂ

೪. ತಾರಕಾಸುರನ ವಿಜೃಂಭಣೆ



ಜಯಿಸುವ ಹಾಗೆ ವರ ಕೇಳಿ ಪಡೆಯಬೇಕು. ಬರೇ ದೇಹಶಕ್ತಿಯಿಂದ ದೊಡ್ಡ ಪ್ರಯೋಜನವಿಲ್ಲ"ಎಂದಳು.

ತಾರಕನು ಅದಕ್ಕೆ ಒಪ್ಪಿಕೊಂಡು, ಒಂದು ನಿರ್ಜನ ಪ್ರದೇಶಕ್ಕೆ ಹೋಗಿ, ಅಲ್ಲಿ ತಪಸ್ಸಿಗೆ ಕುಳಿತನು. ದಿನದಿಂದ ದಿನಕ್ಕೆ ಅವನ ತಪಸ್ಸು ದಾರುಣವಾಗುತ್ತಾ ಹೋಯಿತು. ಆಗ ಅವನ ಶರೀರದಿಂದ ಹುಟ್ಟಿದ ಬೇಗೆಯಿಂದ ಮೂರು ಲೋಕಗಳೂ ಕಾವೇರಿ ಸುಟ್ಟು ಹೋಗುವಂತೆ ಕಾಣ ತೊಡಗಿತು.

ಆಗ ದೇವತೆಗಳೂ ಋಷಿಗಳೂ ಬ್ರಹ್ಮನ ಬಳಿಗೆ ಹೋಗಿ, " ಲೋಕಪಿತಾ, ಆ ತಾರಕನ ತಪಸ್ಸಿನ ಬೇಗೆಗೆ ಪ್ರಪಂಚವು ಉಳಿಯಲಾರದು, ನೀನು ಹೋಗಿ ಅವನ ತಪಸ್ಸನ್ನು ನಿಲ್ಲಿಸಬೇಕು " ಎಂದು ಕೇಳಿಕೊಂಡರು.

ಬ್ರಹ್ಮನು ಸರಸ್ವತೀ ಸಮೇತನಾಗಿ ಹಂಸದ ಮೇಲೇರಿಕೊಂಡು ತಾರಕನ ಬಳಿಗೆ ಬಂದು, "ತಾರಕಾ, ನಿನ್ನ ತಪಸ್ಸಿಗೆ ಮೆಚ್ಚಿದೆನು. ತಪಸ್ಸನ್ನು ನಿಲ್ಲಿಸಿ, ಬೇಕಾದ ವರವನ್ನು ಕೇಳಿಕೋ " ಎಂದೆನು.

ತಾರಕನು ಪರಮಾನಂದದಿಂದ ಬ್ರಹ್ಮನಿಗೆ ನಮಸ್ಕಾರ ಮಾಡಿ, " ಓ ಬ್ರಹ್ಮದೇವಾ ! ನೀನು ವರ ಕೊಡುವೆನೆಂದು ಹೇಳಿದ ಕೂಡಲೇ ನನ್ನ ತಪಸ್ಸು ಫಲಿಸಿತು. ನನಗೆ ಮೂರು ಲೋಕಗಳನ್ನೂ ಜಯಿಸುವ ಶಕ್ತಿಯನ್ನು ಕೊಡು. ಶಿವನಿಂದ ಹುಟ್ಟಿದವನ ಹೊರತು ಬೇರೆ ಯಾರಿಂದಲೂ ನನಗೆ ಮರಣ ಬರಕೂಡದೆಂಬ ಇನ್ನೊಂದು ವರವೂ ಬೇಕು. ನನಗೆ ಬೇಕಾದುದು ಈ ಎರಡು ವರಗಳೇ " ಎಂದು ಕೇಳಿಕೊಂಡನು.

ಬ್ರಹ್ಮನು ತಾರಕನಿಗೆ ಅವನು ಕೇಳಿದ ಎರಡು ವರಗಳನ್ನೂ ಕೊಟ್ಟು, ತನ್ನ ಲೋಕಕ್ಕೆ ಹೊರಟು ಹೋದನು. ತಾರಕನು ತನ್ನ ರಾಜಧಾನಿಯಾದ ಶೋಣಿತ ಪಟ್ಟಣಕ್ಕೆ ಹಿಂದಿರುಗಿ ಬಂದು, ತಾನು ಬ್ರಹ್ಮನಿಂದ ಪಡೆದ ವರಗಳ ಸಮಾಚಾರವನ್ನು ತನ್ನ ತಾಯಿಯೊಂದಿಗೂ ಗುರುವಾದ ಶುಕ್ರಾಚಾರ್ಯನೊಂದಿಗೂ ಹೇಳಿದನು. ತಾಯಿಯ ಅಪೇಕ್ಷೆಯಂತೆ ಇನ್ನು ತಾನು ತ್ರಿಲೋಕ ದಿಗ್ವಿಜಯಕ್ಕೆ ಹೊರಡಲು ಒಳ್ಳೆಯ ಮುಹೂರ್ತ ನೋಡಿ ಹೇಳುವಂತೆ ತಾರಕನು ಶುಕ್ರಾಚಾರ್ಯನನ್ನು ಕೇಳಿಕೊಂಡನು.

ಶುಕ್ರಾಚಾರ್ಯನು ಚೆನ್ನಾಗಿ ಪರಿಶೀಲಿಸಿ ತಾರಕನು ದಿಗ್ವಿಜಯಕ್ಕೆ ಹೊರಡಲು ಮುಹೂರ್ತ ದಿನವನ್ನು ನಿಶ್ಚಯಿಸಿ ಹೇಳಿದನು. ಆ ದಿನದಲ್ಲಿ ತಾರಕನು ತನ್ನ ಚತುರಂಗ ಬಲಗಳೊಂದಿಗೆ ಹೊರಟು, ಮೊದಲು ಸ್ವರ್ಗಕ್ಕೆ ದಾಳಿಯಿಟ್ಟನು. ದೇವತೆಗಳು ಬಹಬೇಗದಲ್ಲೇ ಸೋತು ಅವನಿಗೆ ಶರಣಾದರು. ತಾರಕನು ದೇವೇಂದ್ರನಿಂದ ಕಾಣಿಕೆಗಳನ್ನು ಪಡೆದುಕೊಂಡು, ಅವನ ಸಿಂಹಾಸನವನ್ನು ತನಗೆ ಸ್ವಾಧೀನ ಪಡಿಸಿಕೊಂಡನು.

ಅಲ್ಲಿಂದ ತಾರಕನು ವರುಣನ ಮೇಲೆ ಯುದ್ಧಕ್ಕೆ ಹೋಗಿ ಜಯಿಸಿ, ಅವನ ರಥಾಶ್ವಗಳನ್ನು ಕಾಣಿಕೆಗಳಾಗಿ ಪಡೆದುಕೊಂಡು, ಅಲ್ಲಿಂದ ಯಮನ ಮೇಲೆ ಹೊರಟನು.

ಹೀಗೆ ಅವನಿಂದ ಒಂದೊಂದು ದಿಕ್ಪಾಲಕರೂ ಸೋತು ಸೋತು ಶರಣಾಗತರಾದರು. ದಿಕ್ಪಾಲಕರಿಂದ ಅಪರಿಮಿತವಾದ ಕಾಣಿಕೆಗಳನ್ನು ಪಡೆದು, ತಾರಕನು ತನ್ನ ರಾಜಧಾನಿಗೆ ಬಂದು ಅತಿವೈಭವದಿಂದ ಇರತೊಡಗಿದನು.

ಒಂದು ದಿನ ನಾರದನು ತಾರಕನನ್ನು ನೋಡಲು ಬಂದನು. ತಾರಕನು ಅವನಿಗೆ ಇದಿರಾಗಿ ಹೋಗಿ ಪೂಜಿಸಿ ಕರೆದುಕೊಂಡು ಬಂದು ತನ್ನ ಪಕ್ಕದಲ್ಲೇ ಸಿಂಹಾಸನದ ಮೇಲೆ ಕೂಡಿಸಿ, " ತ್ರಿಲೋಕ ಸಂಚಾರಿಯಾದ ನಾರದ ! ನಿನ್ನ ದಯದಿಂದಲೇ ದಿಕ್ಕುಗಳನ್ನೆಲ್ಲಾ ಜಯಿಸಿಬಿಟ್ಟೆನು ! ತ್ರಿಲೋಕ ಚಕ್ರವರ್ತಿಯಾದೆನು " ಎಂದನು.

ಆ ಮಾತು ಕೇಳಿ ನಾರದನು, " ತಾರಕಾ, ಲೋಕ ಪಿತಾಮಹನಾದ ಬ್ರಹ್ಮನಿಂದ ವರಗಳನ್ನು ಪಡೆದಿರುವ ನೀನು, ಹತ್ತು ದಿಕ್ಕುಗಳನ್ನೂ ಜಯಿಸಿದುದರಲ್ಲಿ ಅಂತಹ ವಿಶೇಷವೇನೂ ಇಲ್ಲ. ನಿನ್ನನ್ನು ಕೊಲ್ಲುವವನೂ ಸಹಾ ಯಾರೂ ಇಲ್ಲವೆಂಬುದೂ ತಿಳಿದ ವಿಷಯ. ನೀನು ಪರಮಶಿವನ ಔರಸ ಪುತ್ರನ ಹೊರತು ಬೇರೆ ಯಾರಿದಲೂ ಸಾವು ಬಾರದಂತೆ ವರ ಪಡೆದಿರುವಿ. ಶಿವನೇನೋ ವೈರಾಗ್ಯದಿಂದ ತಪಸ್ಸು ಮಾಡಿಕೊಂಡಿದ್ದಾನೆ. ಆದುದರಿಂದ ನೀನು ನಿಜವಾಗಿಯೂ ತ್ರಿಲೋಕ ಶೂರನೆಂಬ ಕೀರ್ತಿಗಳಿಸ ಬೇಕಾದರೆ ಹೋಗಿ ವೈಕುಂಠವನ್ನು ಜಯಿಸಿ ಬರಬೇಕು " ಎಂದನು.

ತಾರಕನು ನಾರದನ ಸಲಹೆಯನ್ನು ನಿಜವೆಂದು ಅನುಮೋದಿಸಿ, ತಡ ಮಾಡದೆ ತನ್ನ ಸೇನೆಯನ್ನು ಸೇರಿಸಿಕೊಂಡು ವೈಕುಂಠಕ್ಕೆ ಹೋಗಿ ರಣಭೇರಿ



ಮೊಳಗಿಸಿದನು. ತಾರಕನು ಪಡೆದ ವರಗಳ ಸಂಗತಿಯನ್ನು ತಿಳಿದಿದ್ದ ವಿಷ್ಣು, ಅವನನ್ನು ಕೊಲ್ಲಲು ಸಾಧ್ಯವಿಲ್ಲವೆಂದು ತಿಳಿದು, ತಾರಕನ ಬಳಿಗೆ ಬಂದು ಸವಿಮಾತುಗಳಿಂದ ಅವನನ್ನು ಸ್ನೇಹ ಮಾಡಿಕೊಂಡು ಸಮಾಧಾನಪಡಿಸಿ ಕಳುಹಿಸಿಬಿಟ್ಟನು. ವಿಷ್ಣುವಿನ ಮಾಯದ ಮಾತುಗಳಿಂದ ಅವನು ತನ್ನ ಬಲವನ್ನು ತನಗೆ ಕೊಟ್ಟನೆಂದುಕೊಂಡು ತಾರಕನು ಬಹಳ ಹೆಮ್ಮೆಯಿಂದಲೂ ತೃಪ್ತಿಯಿಂದಲೂ ಉಬ್ಬಿ ಹಿಂದಿರುಗಿದನು.

ಅತ್ತ ಕೈಲಾಸದಲ್ಲಿ ಪಾರ್ವತಿ ಮಾಡುವ ಸೇವಾ ಸಪರ್ಯೆಗಳಿಗೆ ಶಿವನು ಒಪ್ಪಿಕೊಂಡುದರಿಂದ ಹಿಮವಂತನು ಸಂತೋಷಗೊಂಡು, ಪಾರ್ವತಿಯನ್ನು ಅವಳ ಸಖಿಯರೊಂದಿಗೆ ಕರೆದುಕೊಂಡು ಬಂದು ಶಿವನೊಂದಿಗೆ, " ದೇವಾ, ಪಾರ್ವತಿ ಇವಳೇ. ನಿನ್ನ ಸೇವೆಗಾಗಿ ಬಂದಿದ್ದಾಳೆ. ಬೇಕಾದ ರೀತಿಯಲ್ಲಿ ಸೇವೆ ಮಾಡಿಸಿಕೋ, ಚಿಕ್ಕ ಹುಡುಗಿಯಾದ ಇವಳು ಹಾಗೇ



ನಾದರೂ ತಿಳಿಯದೆ ತಪ್ಪು ಮಾಡಿದಲ್ಲಿ ದಯವಿಟ್ಟು ಕ್ಷಮಿಸಿಕೊಳ್ಳಬೇಕು" ಎಂದು ಹೇಳಿ ಪಾರ್ವತಿಯನ್ನು ಅಲ್ಲಿ ಬಿಟ್ಟು, ಮೇನಕೆಯೊಂದಿಗೆ ತನ್ನ ಮನೆಗೆ ಹೊರಟುಹೋದನು.

ಅಂದಿನಿಂದ ಪಾರ್ವತಿ ಪ್ರತಿದಿನವೂ ಉದಯ ಕಾಲದಿಂದ ಮಧ್ಯಾಹ್ನದ ವರೆಗೂ ಶಿವನಿಗೆ ಸಪರ್ಯೆ ಮಾಡುತ್ತಿದ್ದಳು. ಅವನಿಗೆ ಬೇಕಾದ ಪುಷ್ಪಗಳು, ಫಲಗಳು, ನೀರು ಮುಂತಾದುವನ್ನು ತಂದಿಟ್ಟು ಮನೆಗೆ ಹೋಗಿ, ತಾನು ಶಿವನಿಗೆ ಹೇಗೆ ಸೇವೆ ಮಾಡಿದೆನೆಂಬುದನ್ನು ತಂದೆ ತಾಯಿಗಳೊಂದಿಗೆ ಹೇಳುವಳು.

ಶೋಣಿತಪುರಕ್ಕೆ ತಿರುಗಿ ಬಂದ ತಾರಕನು, ಸುಮ್ಮನಿರಲಾಗದೆ, ಸೈನ್ಯದೊಂದಿಗೆ ಸ್ವರ್ಗಕ್ಕೆ ಹೋಗಿ, ದೇವೇಂದ್ರನ ಸಿಂಹಾಸನದ ಮೇಲೆ ಕುಳಿತುಕೊಂಡು, ದೇವತೆಗಳಿಂದ ನಾನಾ ಚಾಕರಿಗಳನ್ನು ಮಾಡಿಸುತ್ತ ಕಾಡಿಸತೊಡಗಿದನು. ಆದರಿಂದ ಲೋಕಗಳೂ ಬಾಧೆಗೊಳಗಾದುವು. ದೇವತೆಗಳನ್ನು ಆರಾಧಿಸುವ ಋಷಿಗಳ ಯಜ್ಞ ಯಾಗಗಳಿಗೂ ತಾರಕನಿಂದ ವಿಘ್ನ ಬರಲು ಪ್ರಾರಂಭವಾಯಿತು. ತಪಸ್ವಿಗಳ ತಪಸ್ಸೂ ಸಾಗದಾಯಿತು.

ಈ ಕಷ್ಟ ಸಹಿಸದೆ ದೇವೇಂದ್ರನೇ ಮೊದಲಾದ ವರು ಬ್ರಹ್ಮನ ಬಳಿಗೆ ಹೋಗಿ, ತಾರಕಾಸುರನು ವರ ಪಡೆದ ಗರ್ವದಿಂದ ತಾವು ನಾನಾ ಹೀನ ಹಿಂಸೆಗಳಿಂದ ನೊಂದು ಹೋದ ಸಂಗತಿಯನ್ನು ಮೊರೆಯಿಟ್ಟುಕೊಂಡರು.

ಬ್ರಹ್ಮನು ತಾರಕನ ಬಳಿಗೆ ಹೋಗಿ, "ತಾರಕಾ, ನೀನು ಮೂರು ಲೋಕಗಳನ್ನೂ ಜಯಿಸಿದವನು ತಾನೆ ? ನೀನು ನಿನ್ನ ಶೋಣಿತ ಪುರದಲ್ಲಿದ್ದೇ ಲೋಕ ಗಳನ್ನೆಲ್ಲಾ ಪಾಲಿಸಿಕೊಂಡಿರು. ಸ್ವರ್ಗಲೋಕ ದೇವೇಂದ್ರನ ಸ್ವಾಧೀನದಲ್ಲೇ ಇರಲಿ. ನಿನಗೂ ದೇವತೆಗಳಿಗೂ ನಡುವೆ ವಿರೋಧ ಬೇಡಪ್ಪ" ಎಂದು ಹಿತಬೋಧನೆ ಮಾಡಿದನು.

ತಾರಕನು ಬ್ರಹ್ಮನ ಮಾತಿಗೆ ಗೌರವ ಕೊಟ್ಟು, ಸ್ವರ್ಗವನ್ನು ಇಂದ್ರನಿಗೆ ಬಿಟ್ಟುಕೊಟ್ಟನು. ದಿಕ್ಪಾಲಕ ರಿಗೂ ಅವರವರ ದಿಕ್ಕುಗಳು ಸಿಕ್ಕಿದುವು. ತಾರಕನು ಶೋಣಿತ ಪುರದಲ್ಲಿದ್ದೇ ಮೂರು ಲೋಕಗಳಿಂದ ಕಪ್ಪಕಾಣಿಕೆ ತೆಗೆದುಕೊಳ್ಳುತ್ತ, ಚಕ್ರವರ್ತಿಯಾಗಿದ್ದನು. ಈಶ್ವರಾರಾಧನೆಯಲ್ಲಿ ತನ್ನ ಹೊತ್ತನ್ನು ಕಳೆಯು ತ್ತಿದ್ದನು ತಾರಕಾಸುರ.

ಇಂದ್ರನಿಗೆ ಮನಸ್ಸಿನಲ್ಲಿ ಕೊರಗು ತುಂಬಿಕೊಂಡೇ ಇದ್ದಿತು. ತಾನು ಸ್ವರ್ಗದ ಅಧಿಕಾರದಲ್ಲಿದ್ದರೂ ಮತ್ತೊಬ್ಬನ ಅಧಿಕಾರದ ಕೆಳಗೇ ಪಾಲಿಸಿಕೊಂಡಿರ ಬೇಕಾದ ಸ್ಥಿತಿ ಬಂದುದರಿಂದ ಬಹಳ ಸಂಕಟ ಪಡುತ್ತಿದ್ದನು.

ಒಂದು ದಿನ ಇಂದ್ರನು ತನ್ನ ಗುರುವಾದ ಬೃಹಸ್ಪತಿಯನ್ನು ಕರೆಯಿಸಿ, "ಗುರುದೇವಾ, ತ್ರಿಲೋಕಾಧಿಪತಿಯಾದ ನಾನು, ತಾರಕನ ಕೈಕೆಳಗಿನ



ಸೇವಕನಾಗಿರುವುದು ದೊಡ್ಡ ಅವಮಾನವಾಗಿದೆ. ಇಂತಹ ಅವಮಾನದಿಂದ ಬದುಕುವುದಕ್ಕಿಂತ ಸಾಯುವುದೇ ಮೇಲು. ನಮಗೆ ಸಾವು ಬಾರದು. ಇದಕ್ಕೆ ಪರಿಹಾರವೆಂದರೆ ತಾರಕನ ಸಾವೇ. ಆಲೋಚನೆಯಲ್ಲಿ ನೀವು ಬಹಳ ಗಟ್ಟಿಗರು. ಈ ತಾರಕನು ಸಾಯುವ ಉಪಾಯವೇನಾದರೂ ಇದ್ದರೆ ಆಲೋಚಿಸಿ ಹೇಳಬೇಕು" ಎಂದು ಕೇಳಿಕೊಂಡನು.

"ನಾವು ಬ್ರಹ್ಮನನ್ನೇ ಆಲೋಚನೆ ಕೇಳುವುದು ಒಳ್ಳೆಯದು. ತಾರಕನ ವಿಜೃಂಭಣೆಗೆ ಅವನೇ ಕಾರಣ" ಎಂದನು ಬೃಹಸ್ಪತಿ.

ಮತ್ತೆ ಎಲ್ಲರೂ ಕೂಡಿ ಬ್ರಹ್ಮನ ಬಳಿಗೆ ಹೋಗಿ ತಾರಕನು ಸಾಯುವ ಉಪಾಯವನ್ನು ಹೇಳಬೇಕೆಂದು ಅವನನ್ನು ಕೇಳಿದರು.

"ಶಿವನಿಗೆ ಹುಟ್ಟಿದ ಪುತ್ರನ ಹೊರತು ಬೇರೆ ಯಾರಿಂದಲೂ ತಾರಕನಿಗೆ ಸಾವಿಲ್ಲ. ನಾನು ಅವನಿಗೆ ಹಾಗೆಯೇ ವರವನ್ನು ಕೊಟ್ಟಿದ್ದೇನೆ. ಸತೀದೇವಿಯ ಸಾವಿನಿಂದ ಮಹಾ ವೈರಾಗ್ಯ ತಾಳಿದ ಶಿವನು ಕೈಲಾಸ ಪರ್ವತದ ಮೇಲೆ ತಪಸ್ಸು ಮಾಡಿಕೊಂಡಿದ್ದಾನೆ. ಆ ಸತೀದೇವಿಯೇ ಹಿಮವಂತನ ಕುಮಾರಿಯಾಗಿ ಹುಟ್ಟಿ, ಶಿವನಿಗೆ ಪರಿಚರ್ಯೆ ಮಾಡಿಕೊಂಡಿದ್ದಾಳೆ. ಅವಳು ತನ್ನ ಮನಸ್ಸಿನಲ್ಲಿ ಶಿವನನ್ನೇ ಗಂಡನನ್ನಾಗಿ ವರಿಸಿಕೊಂಡಿದ್ದಾಳೆ. ನೀವು ಹೇಗಾದರೂ ಶಿವನಿಗೆ ಪಾರ್ವತಿಯ ಮೇಲೆ ಮೋಹ ಬರುವ ಹಾಗೆ ಮಾಡಿರಿ. ಆಮೇಲೆ ಅವರಿಬ್ಬರೊಳಗೆ ವಿವಾಹವನ್ನೂ ನಡೆಯಿಸಿರಿ. ಅಷ್ಟು ಮಾಡಿಬಿಟ್ಟರೆ, ಶಿವಪಾರ್ವತಿಯರಿಗೆ ಹುಟ್ಟುವ ಮಗನು ತಾರಕನನ್ನು ಕೊಲ್ಲುತ್ತಾನೆ. ತಾರಕನ ಸಂಹಾರಕ್ಕೆ ಬೇರೆ ಉಪಾಯವಾವುದೂ ಇಲ್ಲ". ಎಂದು ಹೇಳಿ ಬ್ರಹ್ಮನು ದೇವತೆಗಳನ್ನು ಕಳುಹಿಸಿಕೊಟ್ಟನು. ಬ್ರಹ್ಮನು ಹೇಳಿದ ಮಾತು ಎಲ್ಲರಿಗೂ ಸಂತೋಷವನ್ನುಂಟುಮಾಡಿತು. ಇನ್ನು ಶಿವನಂತಹ ಮಹಾ ವಿರಾಗಿಗೆ ಮೋಹ ಹುಟ್ಟುವಂತೆ ಮಾಡುವ ಕೆಲಸ ಸುಲಭಸಾಧ್ಯವಾದುದಲ್ಲ. ಪಾರ್ವತಿ ಇದಿರಿನಲ್ಲಿದ್ದರೂ ಶಿವನು ಅಷ್ಟೊಂದು ನಿರ್ಲಿಪ್ತನಾಗಿದ್ದಾನೆ.

ದೇವೇಂದ್ರನು ಮನ್ಮಥನನ್ನು ತನ್ನ ಬಳಿಗೆ ಕರೆಯಿಸಿದನು. ಇಂದ್ರನು ಅವನನ್ನು ಗೌರವದಿಂದ ಸಿಂಹಾಸನದಲ್ಲಿ ಕೂಡಿಸಿ, "ಮನ್ಮಥಾ, ನಿನ್ನಿಂದ ಬಹು ಮುಖ್ಯವಾದೊಂದು ಕೆಲಸವಾಗಬೇಕಾಗಿದೆ. ತಾರಕಾಸುರನು ಬ್ರಹ್ಮನಿಂದ ವರಗಳನ್ನು ಪಡೆದು ಮೂರು ಲೋಕಗಳನ್ನೂ ಜಯಿಸಿ ನಮ್ಮನ್ನೆಲ್ಲಾ ಅಡಿಯಾಳಾಗಿ ಮಾಡಿಕೊಂಡಿದ್ದಾನೆ. ಮೂರು ಲೋಕಗಳನ್ನೂ ಆಳುವ ನನ್ನನ್ನೇ ಆ ತಾರಕನು ಆಳುತ್ತಿದ್ದಾನೆ. ಈಶ್ವರನ ಮಗನಿಂದ ಹೊರತು ಅವನಿಗೆ ಸಾವೇ ಬಾರದು. ಈಶ್ವರನೇನೋ ಕೈಲಾಸದಲ್ಲಿ ತಪಸ್ಸು ಮಾಡಿಕೊಂಡಿದ್ದಾನೆ. ಪಾರ್ವತಿ ಅವನಿಗೆ ಸಪರ್ಯೆ ಮಾಡಿಕೊಂಡಿದ್ದಾಳೆ. ಪಾರ್ವತಿ ಶಿವನ



ಸಮೀಪದಲ್ಲಿರುವಾಗ, ನೀನು ಹೇಗಾದರೂ ಮಾಡಿ ಶಿವನಿಗೆ ಮೋಹ ಬರುವ ಹಾಗೆ ಮಾಡಬೇಕು. ನಿನ್ನ ಈ ಸಹಾಯ ಬಹು ಮುಖ್ಯವಾಗಿದೆ" ಎಂದನು.

ಇಂದ್ರನ ಅಭಿಲಾಷೆಯನ್ನು ಕೇಳಿ ಮನ್ಮಥನು ಹೆದರಿ, "ಶಿವನಿಗೆ ಪಾರ್ವತಿಯ ಮೇಲೆ ಮೋಹ ಬರುವ ಹಾಗೆ ಮಾಡಲು ನನ್ನಿಂದಾದೀತೆ? ಶಿವನ ಶಕ್ತಿ ಏನು! ಮಹಿಮೆಯೇನು! ತಪಸ್ಸೇನು! ಅಪ್ಪಿತಪ್ಪಿ ಮುಂಗೋಪಿಯಾದ ಶಿವನು ಮೂರನೇ ಕಣ್ಣನ್ನು ತೆರೆದನೆಂದರೆ ಮೂರು ಲೋಕಗಳೂ ಬೂದಿಯಾದಾವು!" ಎಂದನು.

ಮನ್ಮಥನ ಮಾತು ಕೇಳಿ ಇಂದ್ರಾದಿ ದೇವತೆಗಳು ಅವನಿಗೆ ಧೈರ್ಯ ಹೇಳುತ್ತಾ, "ಅದೇನು ಹೀಗೆ ಹೇಳುವಿ ಮನ್ಮಥಾ! ನಿನ್ನ ಶಕ್ತಿಗೆ ಬಾಗದವರು ಮೂರು ಲೋಕಗಳಲ್ಲಿ ಯಾರಿದ್ದಾರೆ? ನಿನ್ನ ಪ್ರಭಾವದಿಂದ ತಾನೇ ಸ್ತ್ರೀಪುರುಷರು ಮೋಹಾಂಧರಾಗುತ್ತಾರೆ? ನಿನ್ನ ಹೂಬಾಣಗಳ ಹೊಡೆತಕ್ಕೆ ಎಂತಹ ತಪಸ್ವಿಗಳಾದರೂ ನಿಲ್ಲಬಲ್ಲರೆ? ಅದರ ಮೇಲೆ ನಾವು ಹೇಳುವ ಇದು ಲೋಕರಕ್ಷಣಾರ್ಥವಾದ ದೇವಕಾರ್ಯ. ಈಗ ನಿನ್ನಿಂದಲೇ ಲೋಕರಕ್ಷಣೆಯಾಗಬೇಕಾಗಿದೆ. ನಿನಗೆ ಸಹಾಯವಾಗಿ ಮಲಯಮಾರುತವನ್ನೂ, ವಸಂತನನ್ನೂ, ಶುಕಪಿಕಗಳನ್ನೂ ತೆಗೆದುಕೊಂಡು ಹೋಗು. ನಾವು ಕೂಡಾ ಬಂದು ನಿನಗೆ ಸಹಾಯ ಮಾಡುತ್ತೇವೆ. ಶಿವನನ್ನು ನಿನ್ನ ಬಾಣಗಳಿಂದ ಕದಲಿಸಿ ವಶಪಡಿಸಿಕೋ, ಏನೂ ಹೆದರಬೇಡ" ಎಂದನು.

ಮನ್ಮಥನು ಈ ಮಾತುಗಳಿಂದ ಉಬ್ಬಿದನು. ಶಿವನನ್ನು ಜಯಿಸಿ, ಅವನಿಗೆ ಪಾರ್ವತಿಯ ಮೇಲೆ ಮೋಹ ಬರುವಂತೆ ಮಾಡಲು ನಿಶ್ಚಯಿಸಿಕೊಂಡನು. ಅವನು ತನ್ನ ಐದು ಪುಷ್ಪ ಬಾಣಗಳನ್ನೂ ತೆಗೆದುಕೊಂಡು, ವಸಂತನನ್ನು ಜತೆಗಿಟ್ಟುಕೊಂಡು ಶಿವನು ತಪಸ್ಸು ಮಾಡುವ ವನಕ್ಕೆ ಹೋಗಿ ಒಂದು ರಹಸ್ಯ ಪ್ರದೇಶದಲ್ಲಿ ಹೊಂಚು ಹಾಕುತ್ತ, ಪಾರ್ವತಿಯ ಬರುವಿಕೆಯನ್ನು ನಿರೀಕ್ಷಿಸತೊಡಗಿದನು.

ಮನ್ಮಥನು ಪ್ರವೇಶಿಸಿದ ಕೂಡಲೇ ಆ ವನವು ವಸಂತ ಶೋಭೆಯಿಂದ ತುಂಬಿ ಹೋಯಿತು. ಮರಗಳೆಲ್ಲ ಹೊಸ ಚಿಗುರು ತಾಳಿ ಹೂಬಿಟ್ಟುವು. ಗಿಳಿ, ಗೊರವಂಕ, ಕೋಗಿಲೆಗಳು ಹಾಡ ತೊಡಗಿದುವು. ಸ್ವಲ್ಪ ಹೊತ್ತಿಗೆ ಪಾರ್ವತಿ ತನ್ನ ಸಖಿಯರೊಂದಿಗೆ ಆ ವನದೊಳಗೆ ಪ್ರವೇಶಮಾಡಿದಳು. ಅವರೆಲ್ಲರ ಕೈಯಲ್ಲಿ, ಹೂಗಳೂ, ಹಣ್ಣುಗಳೂ, ಪುಷ್ಪಗಳೂ, ಸುಗಂಧದ್ರವ್ಯಗಳೂ ಇದ್ದುವು. ವನವೆಲ್ಲಾ ಹೊಸದಾಗಿ ಮಾರ್ಪಾಟುಗೊಂಡಿರುವುದನ್ನು ನೋಡಿ, ಆಶ್ಚರ್ಯಪಡುತ್ತ ಪಾರ್ವತಿ ಶಿವನಿರುವಲ್ಲಿಗೆ ಹೋದಳು. ವನದ ನೂತನ ಸೌಂದರ್ಯವು ಅವಳನ್ನು ಉಲ್ಲಸಿತಗೊಳಿಸುತ್ತಿದ್ದಿತು.

ಶಿವನು ಪಾರ್ವತಿಯನ್ನು ಕಣ್ಣೆತ್ತಿ ನೋಡಿದನು. ಪಾರ್ವತಿ ಹೊಸ ಸೌಂದರ್ಯದಿಂದಿರುವಂತೆ ಅವನಿಗೆ

ಕಂಡಳು. ವನವೆಲ್ಲವೂ ವಿಚಿತ್ರವಾಗಿ ಕಾಣುತ್ತಿದ್ದಿತು. ಆದರೆ ಶಿವನು ಈ ಬದಲಾವಣೆಗೆ ಕಾರಣವೇನೆಂದು ಆಲೋಚನೆ ಮಾಡುವ ಗೊಡವೆಗೆ ಹೋಗದೆ, ಮತ್ತೆ ಕಣ್ಣುಗಳನ್ನು ಮುಚ್ಚಿ ತಪಸ್ಸಿನಲ್ಲಿ ಮುಳುಗಿಹೋದನು.

ಪಾರ್ವತಿ ಎಂದಿನಂತೆ ಶಿವನಿಗೆ ಷೋಡಶೋಪಚಾರಗಳಿಂದ ಪೂಜಿಸಿ, ನಮಸ್ಕಾರ ಮಾಡಿ ಧ್ಯಾನಿಸುತ್ತಾ, ಶಿವನ ಇದಿರಿನಲ್ಲಿ ನಿಂತಳು. ಆಗ ಶಿವನು ಅವಳನ್ನು ಮತ್ತೆ ಕಣ್ತೆರೆದು ನೋಡಿ, ಎಂದಿನಂತಿಲ್ಲದ ಅವಳ ಸೌಂದರ್ಯವನ್ನು ಪರೀಕ್ಷಿಸುತ್ತ, ಎವೆ ಇಕ್ಕದೆ ನೋಡುತ್ತಾ ಇದ್ದು ಬಿಟ್ಟನು.

ಸ್ವಲ್ಪ ಹೊತ್ತಿಗೆ ಪಾರ್ವತಿ ಶಿವನಿಂದ ಅಪ್ಪಣೆ ತೆಗೆದುಕೊಂಡಂತೆ ಅಡ್ಡಬಿದ್ದು, ಎದ್ದು ಹೋಗಲು ತೊಡಗಿದಳು. ಶಿವನು ಮಾತಾಡದೆ ಮತ್ತೆ ಕಣ್ಣು ಮುಚ್ಚಿಕೊಂಡನು. ಆ ಸಮಯದಲ್ಲಿ ಮನ್ಮಥನು ತನ್ನ ಪುಷ್ಪ ಬಾಣಗಳನ್ನು ಒಂದೊಂದಾಗಿ, ಶಿವನ ಹೃದಯಕ್ಕೆ ಗುರಿಯಿಟ್ಟು ಹೊಡೆಯ ತೊಡಗಿದನು. ಅರವಿಂದ, ಅಶೋಕ, ನವಮಲ್ಲಿಕಾ, ಚೂತಪುಷ್ಪಗಳು ಶಿವನನ್ನು ಕದಲಿಸಲಾರದೆ ಹೋದುವು. ಆದರೆ ಮನ್ಮಥನ ಐದನೇ ಬಾಣವಾದ ನೀಲೋತ್ಪಲವು ಶಿವನ ಹೃದಯವನ್ನು ಗಾಯಪಡಿಸಿತು. ಆ ನೋವನ್ನು ತಾಳಲಾಗದೆ ಶಿವನು ಕೋಪದಿಂದ, "ಯಾರೋ ಅದು, ನನ್ನನ್ನು ಪುಷ್ಪಬಾಣಗಳಿಂದ ಹೊಡೆಯುವವನು!" ಎನ್ನುತ್ತ ಎದ್ದು ನಿಂತು ಮೂರನೇ ಕಣ್ಣನ್ನು ತೆರೆದು ಆ ಕಡೆಗೆ ನೋಡಿದನು.

ಆ ಹಣೆಗಣ್ಣಿನೊಳಗಿನಿಂದ ಅಗ್ನಿ ಜ್ವಾಲೆಗಳು ಹೊರಟು, ವನವನ್ನೆಲ್ಲಾ ಕ್ಷಣ ಮಾತ್ರದಲ್ಲಿ ಬೂದಿ ಮಾಡಿದವು. ಅದರೊಂದಿಗೆ ಮನ್ಮಥನು ಕೂಡಾ ಬೂದಿಯಾಗಿ ಹೋದನು.

ಆ ವಿಪರೀತವನ್ನು ನೋಡಿ ದೇವೇಂದ್ರನೇ ಮೊದಲಾದ ದೇವತೆಗಳು ಶಿವನ ಇದಿರಿಗೆ ಬಂದು ದೀನರಾಗಿ ಸ್ತೋತ್ರಪಾಠ ಮಾಡಿ, ಶಿವನನ್ನು ಪ್ರಸನ್ನಗೊಳಿಸಿದರು. ಶಿವನು ತನ್ನ ಹಣೆಗಣ್ಣನ್ನು ಮುಚ್ಚಿ, ಅಗ್ನಿಜ್ವಾಲೆಗಳನ್ನು ಉಪಸಂಹಾರ ಮಾಡಿದನು.

ಆಗ ಮನ್ಮಥನ ಹೆಂಡತಿಯಾದ ರತೀದೇವಿ ಶಿವನ ಇದಿರಿಗೆ ಬಂದು, "ಸದಾಶಿವಾ! ನನ್ನ ಗಂಡನಿಂದ ಯಾವ ತಪ್ಪೂ ನಡೆದಿಲ್ಲ. ನಿನ್ನಿಂದ ಪಾರ್ವತಿಗೆ ಮಗನು ಹುಟ್ಟಿದರೆ, ಅವನು ತಾರಕಾಸುರನನ್ನು ಕೊಲ್ಲುತ್ತಾನೆಂಬ ಆಸೆಯಲ್ಲಿ, ನಿನಗೆ ಪಾರ್ವತಿಯ ಮೇಲೆ ಮೋಹ ಬರುವ ಹಾಗೆ ಮಾಡುವಂತೆ ಎಲ್ಲರೂ ನನ್ನ ಗಂಡನಿಗೆ ಪ್ರೇರೇಪಣೆ ಮಾಡಿದರು. ನಮ್ಮ ತಪ್ಪನ್ನು ಮನ್ನಿಸಿ, ನನಗೆ ಪತಿಭಿಕ್ಷೆ ನೀಡು. ದೇವಾ, ಪಾರ್ವತಿಯನ್ನು ವಿವಾಹವಾಗಿ ಲೋಕಗಳನ್ನು ಕಾಪಾಡು!" ಎಂದು ಬೇಡಿಕೊಂಡಳು.





# ದುರಾಶೆಯ ಘೋರ

ಬಾಗ್ದಾದ್ ನಗರದ ಸಮೀಪದಲ್ಲಿ ಚಿಕ್ಕದೊಂದು ಪಟ್ಟಣವಿದ್ದಿತು. ಅಲ್ಲಿ ಇಸ್ಮಾಯಿಲ್ ಎಂಬೊಬ್ಬ ಕಟುಕವೃತ್ತಿಯವನಿದ್ದನು. ಅವನ ಅಂಗಡಿಯ ಸಮೀಪದಲ್ಲೆಲ್ಲಿಯೂ ಇನ್ನೊಂದು ಮಾಂಸದಂಗಡಿ ಇಲ್ಲದುದರಿಂದ, ಇಸ್ಮಾಯಿಲನಿಗೆ ಒಳ್ಳೇ ಲಾಭ ಸಾಟಿಯಾಗಿಯೇ ವ್ಯಾಪಾರ ನಡೆಯುತ್ತಿದ್ದಿತು.

ಒಂದು ದಿನ ಇಸ್ಮಾಯಿಲನ ಅಂಗಡಿಗೆ ಒಬ್ಬ ಮುದುಕನು ಬಂದನು. ಅವನು ಹಾಕಿಕೊಂಡ ದುಸ್ತುಗಳಿಂದ ಯಾವನೋ ವಿದೇಶೀಯನಂತೆ ಕಾಣುತ್ತಿದ್ದನು.

ಆ ಮುದುಕನು ಅಂಗಡಿಯ ಮಾಂಸಗಳನ್ನು ನೋಡಿ, ತನಗೆ ಎಳೇ ಕುರಿಮಾಂಸ ಒಂದು ಸೇರು ಬೇಕೆಂದು ಇಸ್ಮಾಯಿಲನನ್ನು ಕೇಳಿದನು.

"ಆ ಬಗೆಯ ಮಾಂಸ ಬೇಕಾದರೆ ಒಂದು ಸೇರಿಗೆ ಒಂದು ಬೆಳ್ಳಿ ನಾಣ್ಯ ಕೊಡಬೇಕು" ಎಂದನು ಇಸ್ಮಾಯಿಲ್.

ಮುದುಕನು ಸ್ವಲ್ಪ ಹಿಂದೆ ಮುಂದೆ ನೋಡಿ, ಕಣ್ಣುಗಳನ್ನು ಅಗಲಿಸಿ, "ಒಂದು ಸೇರು ಮಾಂಸಕ್ಕೆ ಒಂದು ಬೆಳ್ಳೀ ನಾಣ್ಯವೇ ? ಇದೆಂಥ ದುಬಾರಿ ಬೆಲೆಯಪ್ಪ ! ನಮ್ಮ ದೇಶದಲ್ಲಿ ಆ ಬೆಲೆಗೆ ಒಂದು ಕುರಿಯನ್ನೇ ತೆಗೆದುಕೊಳ್ಳಬಹುದು !" ಎಂದನು.

ಆ ಮಾತು ಕೇಳಿ ಇಸ್ಮಾಯಿಲ್ ಕೋಪದಿಂದ, "ನಿನಗೆ ನಾನು ಹೇಳಿದ ಬೆಲೆ ಕೊಡಲು ಇಷ್ಟವಿಲ್ಲದಿದ್ದರೆ, ಇನ್ನೊಂದು ಕ್ಷಣವೂ ನಿಲ್ಲದೆ ಇಲ್ಲಿಂದ ಹೋಗಿ ಬಿಡು !" ಎಂದನು.

ಅದನ್ನು ಕೇಳಿ ಮುದುಕನು ಸಣ್ಣಗೆ ನಕ್ಕು, ಒಂದು ಬೆಳ್ಳಿ ನಾಣ್ಯವನ್ನು ಇಸ್ಮಾಯಿಲನಿಗೆ ಕೊಟ್ಟು, ಮಾಂಸ ತೆಗೆದುಕೊಂಡು ಹೊರಟು ಹೋದನು.

ಮರು ದಿನ ಕೂಡಾ ಆ ವಿದೇಶೀ ಮುದುಕನು ಇಸ್ಮಾಯಿಲನ ಅಂಗಡಿಗೆ ಬಂದನು. ಈ ಸಾರಿ ಅವನು ಮಾಂಸದ ಬೆಲೆಯನ್ನು ಕುರಿತು ಚೌಕಾಸಿ ಮಾಡುವ ಗೊಡವೆಗೆ ಹೋಗದೆ, ಒಂದು ಸೇರು ಮಾಂಸ ಕೊಂಡುಕೊಂಡು, ಥಗಥಗನೆ ಹೊಳೆಯುವ ಒಂದು ಬೆಳ್ಳೀ ನಾಣ್ಯವನ್ನು ಇಸ್ಮಾಯಿಲನಿಗೆ ಕೊಟ್ಟನು.

ಆದರೆ ಇಸ್ಮಾಯಿಲ್ ಅದನ್ನು ಮುದುಕನಿಗೇ ಹಿಂದಿರುಗಿ ಕೊಟ್ಟು, "ಇವತ್ತು ಮಾಂಸದ ಬೆಲೆ ಹೆಚ್ಚಾಗಿದೆ. ಒಂದು ಸೇರು ಮಾಂಸಕ್ಕೆ ಎರಡು



ಬೆಳ್ಳಿ ನಾಣ್ಯ ಕೊಡಬೇಕು" ಎಂದನು. ಮುದುಕನು ನಿನ್ನೆಯ ಹಾಗೆಯೇ ಸಣ್ಣಗೆ ನಗುತ್ತ ಅವನಿಗೆ ಎರಡು ಬೆಳ್ಳಿ ನಾಣ್ಯಗಳನ್ನೇ ಕೊಟ್ಟು ಮಾಂಸ ತೆಗೆದುಕೊಂಡು ಹೋದನು.

ಆದರೆ ಮುದುಕನು ಕೊಟ್ಟ ಮೂರು ಬೆಳ್ಳಿ ನಾಣ್ಯಗಳೂ ಆದಿನ ರಾತ್ರಿಯಲ್ಲಿ ಮೂರು ಮರದ ತುಂಡುಗಳಾಗಿ ಬದಲಾಯಿಸಿದುವು.

ಅದನ್ನು ನೋಡಿ ಇಸ್ಮಾಯಿಲ್ ಹಲ್ಲು ಕಡಿದು ಕೊಂಡನು. ಮರುದಿನ ಮುದುಕನು ಬಂದಕೂಡಲೇ ಅವನ ಕುತ್ತಿಗೆಯನ್ನು ಗಟ್ಟಿಯಾಗಿ ಹಿಡಿದು, "ಎಲೋ ಮುದಿ ಹೆಣದವನೇ! ಏನು ಧೈರ್ಯ ನಿನಗೆ! ನನಗೆ ಮೋಸ ಮಾಡುವಿಯೇನು?" ಎಂದು ಗರ್ಜಿಸಿ ನಡುಗುತ್ತಾ ಕೇಳಿದನು ಇಸ್ಮಾಯಿಲ್.

ಮುದುಕನು ಸ್ವಲ್ಪವೂ ಗಾಬರಿಯಾಗದೆ, "ತುಚ್ಛಾ! ಮೋಸಮಾಡಿದ್ದು ನಾನಲ್ಲ ನೀನೇ!" ಎಂದನು ತಿರಸ್ಕರಿಸುವಂತೆ.

ಆ ಮಾತಿಗೆ ಇಸ್ಮಾಯಿಲ್ ಇನ್ನಷ್ಟು ಉಗ್ರನಾಗಿ ಅವಡುಗಚ್ಚುತ್ತ, ಮುದುಕನನ್ನು ಹೊಡೆಯ ತೊಡಗಿದನು.

ಮುದುಕನು ರಕ್ಷಿಸುವಂತೆ ದೊಡ್ಡ ಕಂಠದಿಂದ ಕೂಗಾಡ ತೊಡಗಿದನು. ಆ ಕೂಗನ್ನು ಕೇಳಿ ಪೇಟೆಯಲ್ಲಿ ನಡೆದಾಡುವ ಅನೇಕರು ಓಡೋಡಿ ಅಲ್ಲಿಗೆ ಬಂದು ಕೂಡಿದರು.

"ಈ ಮೋಸಗಾರ ಮುದುಕ ಎರಡು ದಿನಗಳಿಂದ ನನಗೆ ಕಳ್ಳ ನಾಣ್ಯಗಳನ್ನು ಕೊಟ್ಟು ಕುರಿಮಾಂಸ ಕೊಂಡುಕೊಂಡು ಹೋಗುತ್ತಾನೆ" ಎಂದು ಗುಂಪಿನವರೊಂದಿಗೆ ಇಸ್ಮಾಯಿಲ್ ಹೇಳಿದನು.

"ನಾನು ಹೇಳುವ ಮಾತು ಕೇಳಿರಿ! ಇವನು ಕೊಡುವ ಹಾಳು ಮಾಂಸಕ್ಕೆ ಬೆಳ್ಳಿ ನಾಣ್ಯ ಕೊಡುವಷ್ಟು ಮೂರ್ಖನಲ್ಲ ನಾನು. ಕುರಿಮಾಂಸ ಎಂದು ಹೇಳಿ ಇವನು ಮಾರುವುದು ನಾಯಿಯ ಮಾಂಸ ಎಂದು ನನಗೆ ಗೊತ್ತಾಗಿದೆ. ಈ ಸಂಗತಿಯನ್ನು ನಾಲ್ಕು ಮಂದಿಗೆ ಹೇಳುತ್ತೇನೆಂಬ ಭಯದಲ್ಲಿ ನಾನು ಮೋಸಗಾರನೆಂದು ನಿಮ್ಮೊಂದಿಗೆ ಹೇಳುತ್ತಾನೆ. ನೀವೇ ಹೇಳಿ, ಯಾರು ಮೋಸಗಾರರು?" ಎಂದನು ಮುದುಕ.

ಅಲ್ಲಿ ಸೇರಿದ ಜನರಲ್ಲಿ ಒಬ್ಬನು ಮುದುಕನನ್ನು ನೋಡಿ, "ನೀನು ಹೇಳುವ ಸಂಗತಿ ಹೇಗೆ ನಂಬುವುದು? ನಿಜವೆಂದು ನಿರೂಪಿಸಬಲ್ಲೆಯಾ?" ಎಂದು ಕೇಳಿದನು.

"ನಿರೂಪಿಸಬಲ್ಲೆನೆಂಬ ನಂಬುಗೆಯಲ್ಲೇ ಹೇಳುತ್ತಿದ್ದೇನೆ" ಎಂದು ಮುದುಕನು ಅವರನ್ನೆಲ್ಲ ಅಂಗಡಿಯ ಹಿಂದುಗಡೆಯಲ್ಲಿರುವ ಆವರಣದೊಳಗೆ ಕರೆದುಕೊಂಡು ಹೋದನು. ಅಲ್ಲಿ ಇದಿರಾದ ದೃಶ್ಯವನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಅಲ್ಲಿ ಕುರಿಗಳೇ ಇಲ್ಲ! ಇಸ್ಮಾಯಿಲನ ಆವರಣದಲ್ಲಿ ಕಟ್ಟಿ ಹಾಕಲ್ಪಟ್ಟಿದ್ದ

ಕುರಿಗಳೆಲ್ಲವೂ ನಾಯಿಗಳಾಗಿ ಬದಲಾಗಿ ಕಯಿಂ, ಕುಯಿಂ ಎಂದು ಸುಮ್ಮನೆ ಕಿರಿಚಿಕೊಂಡಿದ್ದುವು.

ಅದನ್ನು ನೋಡಿ ಇಸ್ಮಾಯಿಲನಿಗೆ ಬುದ್ಧಿಕೆಟ್ಟು ಹೋಗುವಂತಾಯಿತು. ಸ್ವಲ್ಪ ಹೊತ್ತು ಬೋಧ ತಪ್ಪಿದಂತಿದ್ದ ಅವನು, ಮತ್ತೆ ಸ್ತಿಮಿತಕ್ಕೆ ಬಂದು, ಮುದುಕನನ್ನು ಯಾವನೋ ಮಂತ್ರ ತಂತ್ರ ಕಲಿತ ದುಷ್ಟನೆಂದು ಜನರೊಂದಿಗೆ ಹೇಳಲು ನೋಡಿದನು. ಅಷ್ಟರೊಳಗೆ ಕೂಡಿದ್ದ ಜನರು ಅವನನ್ನು ಹಿಡಿದು ನಾಲ್ಕಾರು ಒದೆಕೊಟ್ಟು, ಹಿಂಗಟ್ಟು ಮುರಿಗಟ್ಟಿ, ಪಟ್ಟಣಪಾಲಕನಾದ ಅಮೀರನ ಬಳಿಗೆ ಎಳೆದು ಕೊಂಡು ಹೋದರು.

ನಡೆದ ಸಂಗತಿಯನ್ನೆಲ್ಲ ಕೇಳಿ, ಅಮೀರನು ಅತ್ಯಂತ ಕೋಪದಿಂದ, "ಎಲೋ ನೀಚ! ನನ್ನ ಅಡಿಗೆಯವನು ಕೂಡಾ ಬಹಳ ಕಾಲದಿಂದ ನಿನ್ನ ಅಂಗಡಿಯಿಂದಲೇ ಮಾಂಸ ತರುತ್ತಾನೆಂದು ನನಗೆ ಗೊತ್ತಿದೆ. ನಿನಗೆ ಸರ್ವಾಂಗ ಚಿತ್ರವಧೆಯೇ ತಕ್ಕ ಶಿಕ್ಷೆ!" ಎಂದು ಹೇಳಿ, ತನ್ನ ಮುಂದಿದ್ದ ದೊಡ್ಡ ದೊಂದು ಪುಸ್ತಕವನ್ನು ಭಕ್ತಿಯಿಂದ ತೆರೆದು ಸ್ವಲ್ಪ ಹೊತ್ತು ನೋಡಿ, ಬೇಸರದ ಧ್ವನಿಯಿಂದ, "ಹೂಂ. ನೀನು ಸ್ವಲ್ಪಮಟ್ಟಿಗೆ ಅದೃಷ್ಟವಂತನೇ. ನೀನು ಮಾಡಿದ ತಪ್ಪಿಗೆ ಮರಣ ಶಿಕ್ಷೆ ಕೊಡಬೇಕೆಂದಿದ್ದೆ. ಆದರೆ ಶಿಕ್ಷಾಸ್ಮೃತಿ ಒಪ್ಪುವುದಿಲ್ಲ" ಎಂದು ಭಟರನ್ನು ಕರೆದು, "ಈ ದುಷ್ಟನಿಗೆ ಮೊದಲು ನೂರೊಂದು ಸಾರಿ ಕೊರಡೆಯಿಂದ ಬಾರಿಸಿರಿ. ಆಮೇಲೆ ಒಂದು ಕಣ್ಣನ್ನು ಕಿತ್ತು ತೆಗೆಯಿರಿ. ಇಷ್ಟು ನಡೆದ ಮೇಲೆ ಇವನನ್ನು ತೆಗೆದುಕೊಂಡು ಹೋಗಿ ನಮ್ಮ ದೇಶದ ಸರಿಹದ್ದಿನ ಆಚೆಗೆ ಬಿಸುಟು ಬಂದು ಬಿಡಿ!" ಎಂದು ಹೇಳಿ ಇಸ್ಮಾಯಿಲನನ್ನು ನೋಡಿ, "ಎಲೋ, ನಿನ್ನ ಮನೆ, ಅಂಗಡಿ, ಕೂಡಿಸಿಟ್ಟ ಧನ ಎಲ್ಲವೂ ಸುಲ್ತಾನರ ವಶಕ್ಕೆ ಸೇರತಕ್ಕದ್ದು!" ಎಂದು ಹೇಳಿದನು ಆಜ್ಞೆಯಂತೆ.



ಭಟರು ಅಮೀರನ ಆಜ್ಞೆಯ ಪ್ರಕಾರ ಇಸ್ಮಾಯಿಲ ನನ್ನು ಕೊರಡೆಯಿಂದ ಹೊಡೆದು, ಬಲಗಣ್ಣಿನ ಗುಡ್ಡು ಕಿತ್ತು, ಅವನನ್ನು ಒಯ್ದು ದೇಶದ ಸರಿ ಹದ್ದಿನಾಚೆಗೆ ಬಿಟ್ಟರು.

ಅಹಂಕಾರವು ಮಿತಿಮೀರಿ, ಅದರ ಮೇಲೆ ಧನದ ಆಶೆಯೂ ಹೆಚ್ಚಾದುದರಿಂದಲೇ ತನಗೆ ಇಂತಹ ಘೋರಗತಿ ಬಂದಿತೆಂದು ದುಃಖಿಸುತ್ತ, ಇಸ್ಮಾಯಿಲ್ ಕೆಲವು ದಿನಗಳ ಮೇಲೆ ಮತ್ತೊಂದು ನಗರವನ್ನು ಸೇರಿದನು. ಅಲ್ಲಿ ಅವನು ಭಿಕ್ಷೆಬೇಡಿ ತಿನ್ನುತ್ತ ಕಾಲಕಳೆಯುತ್ತಿದ್ದನು. ಒಂದು ದಿನ ಅವನ ಜತೆ ಭಿಕ್ಷುಕರು ಮಾತಿನ ಸಂದರ್ಭದಲ್ಲಿ ಅವನೊಂದಿಗೆ, "ಎಲೋ, ಈ ನಗರದ ಸುಲ್ತಾನರಿಗೆ ಶಕುನದ ಹುಚ್ಚು ಜೋರಾಗಿದೆ ಗೊತ್ತಾ? ಒಂಟಿ ಕಣ್ಣಿನವನನ್ನು ಕಂಡರೆ ದುಶ್ಶಕುನ ಅಂದುಕೊಳ್ಳುತ್ತಾನೆ. ಅಂಥ ವನಿಗೆ ಬೆನ್ನು ಬಾತು ಸೀಳುವ ಹಾಗೆ ಕೊರಡೇ ಏಟು ಬೀಳುತ್ತವೆ. ಅದರ ಮೇಲೆ ಬಲಗಣ್ಣು

ಇಲ್ಲದವನನ್ನು ಕಂಡರಂತೂ ಗಲ್ಲಿನ ಶಿಕ್ಷೆಯೇ! ಆದ್ದರಿಂದ ನೀನು ಸುಲ್ತಾನನ ಕಣ್ಣಿಗೆ ಬೀಳದಂತೆ ಜಾಗರೂಕನಾಗಿರು!" ಎಂದು ಎಚ್ಚರಿಕೆ ಹೇಳಿದರು.

ಕೆಲವು ದಿನಗಳ ಮೇಲೆ ಒಂದು ದಿನ ಇಸ್ಮಾಯಿಲ್ ಭಿಕ್ಷೆ ಬೇಡುತ್ತಾ ರಾಜ ಬೀದಿಯಲ್ಲಿ ಹೋಗುತ್ತಿರುವಾಗ, ದೊಡ್ಡ ಕೋಲಾಹಲದ ಶಬ್ದವು ಕೇಳತೊಡಗಿತು. ಕೆಲಮಂದಿ ಕುದುರೇ ಸವಾರರು, ಜನರಿಗೆ ಎಚ್ಚರಿಕೆ ಹೇಳುತ್ತಾ, ಬದಿಗೆ ಸರಿಸುತ್ತಾ ದೌಡಾಯಿಸಿಕೊಂಡು ಬರತೊಡಗಿದರು. ಅದನ್ನು ಕೇಳಿದಾಗ ಇಸ್ಮಾಯಿಲನಿಗೆ ಆ ದಾರಿಯಲ್ಲಿ ಸುಲ್ತಾನನು ಬರುತ್ತಿದ್ದಾನೆಂಬ ಸಂಗತಿ ತಿಳಿಯಿತು. ಆಗ ಅವನಿಗೆ ಜತೆ ಭಿಕ್ಷುಕರು ಹೇಳಿದ ಎಚ್ಚರಿಕೆ ನೆನಪಾಯಿತು. ಅವನು ಗಬಿಬಿಡಿಯಿಂದ ಎಲ್ಲಿ ಅಡಗುವುದೆಂದು ಅತ್ತಿತ್ತ ನೋಡಿ, ಎರಡು ಬಾಗಿಲುಗಳೂ ತೆರೆದಿದ್ದ ಒಂದು ಮನೆಯೊಳಗೆ ಫಕ್ಕನೆ ಪ್ರವೇಶಿಸಿದನು.

ಹಾಗೆ ಅವನನ್ನು ನೋಡಿದ ಕೂಡಲೇ ಅಲ್ಲಿದ್ದ ಕಲ್ಲುಗುಂಡಿನಂತೆ ಗಟ್ಟಿಮುಟ್ಟಾದ ಮೂವರು ವಸ್ತಾದಿಗಳು ಒಮ್ಮೆಗೇ ಅವನ ಮೇಲೆ ಬಿದ್ದು, "ಸಿಕ್ಕಿದೆಯಾ ಕಳ್ಳ ಭಡವಾ! ಕಳೆದ ಮೂರು ದಿನಗಳಿಂದ, ನಾವು ಇಲ್ಲದಿರುವಾಗ ಅಡಿಗೆ ಕೋಣೆಗೆ ನುಗ್ಗಿ ಅಲ್ಲಿ ಇದ್ದುದನ್ನೆಲ್ಲ ತಿಂದು ಹೋಗುವ ಬಿಕನಾಸಿ ಕಳ್ಳ ನೀನೇನಾ!" ಎನ್ನುತ್ತ ಹಣ್ಣುಗಾಯಿ ನೀರುಗಾಯಿ ಮಾಡಿ ಬೀದಿಗೆ ದೂಡಿಬಿಟ್ಟರು.

ಸ್ವಲ್ಪ ಹೊತ್ತಿನ ಮೇಲೆ ಇಸ್ಮಾಯಿಲನಿಗೆ ಎಚ್ಚರ ಬಂತು. ಅವನು ಇನ್ನು ಆ ದೇಶದಲ್ಲಿರುವುದು ಕ್ಷೇಮವಲ್ಲವೆಂದುಕೊಂಡು, ಅಲ್ಲಿಂದ ಕಾಲೆಳೆಯುತ್ತ ಮತ್ತೊಂದು ದೇಶಕ್ಕೆ ಹೋಗಿ ಸೇರಿದನು.

ಇಷ್ಟರೊಳಗೆ ಇಸ್ಮಾಯಿಲನ ತಮ್ಮನು, ತನ್ನ ಅಣ್ಣನಿಗೆ ಹಿಡಿದಿರುವ ದುರ್ದಶೆಯನ್ನು ತಿಳಿದು ಹುಡುಕುತ್ತಾ ಅವನನ್ನು ಕಂಡುಹಿಡಿದು, ತನ್ನ ಮನೆಗೆ ಕರೆದುಕೊಂಡುಹೋದನು. ಇಸ್ಮಾಯಿಲ್ ತಮ್ಮನಿಗೆ ತಾನು ಪಟ್ಟ ಕಷ್ಟಗಳನ್ನೆಲ್ಲಾ ಹೇಳಿ, "ಅಪ್ಪಾ, ತಮ್ಮಾ, ನನ್ನ ದುರಾಶೆಯೇ ನನ್ನ ಇಷ್ಟೆಲ್ಲಾ ಕಷ್ಟಗಳಿಗೆ ಕಾರಣ. ನೀನು ಕೂಡಾ ನನ್ನ ಹಾಗೆಯೇ ಮಾಂಸ ಮಾರಿ ಜೀವಿಸುವ ಕಟುಕವೃತ್ತಿಯವನು ತಾನೇ? ನನ್ನ ಹಾಗೆ ಚೆನ್ನಾಗಿ ಸಂಪಾದಿಸಿರುವೆಯಷ್ಟೆ? ಒಂದು ಸಂಗತಿ ನೆನಪಿನಲ್ಲಿಟ್ಟುಕೋ. ಎಂದಿಗೂ ಮನಸ್ಸಿನಲ್ಲಿ ದುರಹಂಕಾರ ಇಟ್ಟುಕೊಳ್ಳಬೇಡ. ಹೊರ ದೇಶಗಳಿಂದ ಇಲ್ಲಿಗೆ ಬರುವವರು ನಮಗೆ ಅತಿಥಿಗಳಂಥವರು. ಅಂಥವರಿಗೆ ಮೋಸ ಮಾಡುವ ಪ್ರಯತ್ನ ಮಾಡದಿರಪ್ಪಾ! ಅಂಥವರಲ್ಲಿ ಎಂತೆಂಥವರೋ ಇರಬಹುದು!" ಎಂದು ನೀತಿ ಹೇಳಿದನು.



# ಕಾಡು ಕೋಣಗಳು

ನೂರು ವರ್ಷಗಳ ಕೆಳಗೆ ಅಮೆರಿಕಾ ಖಂಡದಲ್ಲಿ ಪೂರ್ವ ಪಶ್ಚಿಮ ತೀರಗಳನ್ನು ಕೂಡಿಸುವ ಉದ್ದವಾದ ರೈಲು ಮಾರ್ಗ ಹಾಕಿದರು. ಪೂರ್ವ ಪಶ್ಚಿಮ ದೇಶಗಳ ನಡುವೆ ಪ್ರಯಾಣಗಳ ಅಭಿವೃದ್ಧಿಗೆ ಈ ರೈಲು ಮಾರ್ಗ ಎಷ್ಟೋ ಸಹಾಯವಾಯಿತು. ಆದರೂ ಈ ರೈಲು ಮಾರ್ಗ ನಿರ್ಮಾಣ ಕಾಲದಲ್ಲಿ ರೈಲ್ವೇ ಕಾರ್ಮಿಕರ ಆಹಾರಕ್ಕಾಗಿ, ಅಲ್ಲಿಯ ಕಾಡುಗಳಲ್ಲಿ ವಿಶೇಷವಾಗಿ ಕಾಣಿಸುವ ಕಾಡು ಕೋಣಗಳು ವಿಪರೀತವಾಗಿ ಕೊಲ್ಲಲ್ಪಟ್ಟುವು. ಹದಿನೆಂಟು ತಿಂಗಳುಗಳವರೆಗೆ ಸಾಗಿದ ಈ ರೈಲು ಮಾರ್ಗ ನಿರ್ಮಾಣ ಸಮಯದಲ್ಲಿ, ಬಫಲೋಬಿಲ್ ಎಂಬ ಪ್ರಮುಖ ಬೇಟೆಗಾರನು ದಿನಕ್ಕೆ ಅರವತ್ತೊಂಬತ್ತರವರೆಗೂ ಒಟ್ಟು ನಾಲ್ಕು ಸಾವಿರ ಕಾಡು ಕೋಣಗಳನ್ನು ಬೇಟೆಯಾಡಿ ಕೊಂದನು. ರೈಲ್ವೆ ಕಾರ್ಮಿಕರಿಗೆ ದಿನಾ ಬಲವರ್ಧಕವಾದ, ಕಾಡು ಕೋಣಗಳ ಮಾಂಸಾಹಾರ ಕೊಡಲಾಯಿತು.

ಆದರೂ ಇತ್ತೀಚೆಗೆ ಈ ಕಾಡು ಕೋಣಗಳ ಸಂರಕ್ಷಣೆಗೆ, ಬಲವಾದ ಕ್ರಮ ತೆಗೆದುಕೊಂಡುದರಿಂದ, ಅಮೆರಿಕಾದಲ್ಲಿ ೩೦,೦೦೦ ಕಾಡು ಕೋಣಗಳೂ, ಕೆನಡಾದಲ್ಲಿ ೨೦,೦೦೦ ಕೋಣಗಳೂ ಮಂದೆ ಮಂದೆಯಾಗಿ ತಿರುಗುತ್ತವೆ.

ಭಾರತ ದೇಶದಲ್ಲಿ 'ಬೈಸನ್', ಎಂದು ಕರೆಯಲ್ಪಡುವ ಈ ಕೋಣಗಳು, ಅತಿ ಪ್ರಾಚೀನ ಕಾಲದಿಂದಲೂ, ಅಡವಿ ಜಾತಿಯವರಿಗೆ ಗುಡಾರಗಳಿಗೂ, ದುಸ್ತುಗಳಿಗೂ ಬೇಕಾದ ಸಾಮಗ್ರಿಯನ್ನು ಒದಗಿಸುತ್ತವೆ. ಅವುಗಳ ಮಾಂಸವನ್ನೂ ಸಹ ತಿನ್ನುತ್ತಾರೆ.

ಬಲವಾದ ತಲೆಯಿರುವ ಈ ಕೋಣಗಳು ಪ್ರಾಚೀನ ಕಾಲದಲ್ಲಿ, ಮೇವಿಗಾಗಿ, ವಸಂತ ಋತುವಿನಲ್ಲಿ ಉತ್ತರ ದಿಕ್ಕಿಗೂ, ಶರತ್ಕಾಲದಲ್ಲಿ ದಕ್ಷಿಣ ದಿಕ್ಕಿಗೂ ಗುಂಪು ಗುಂಪಾಗಿ ಗುಡ್ಡ, ಕಣಿವೆ, ನದೀ ನದಗಳನ್ನು ದಾಟುತ್ತಾ, ಈಜುತ್ತಾ, ಸಾಗುತ್ತವೆ. ಹಾಗೆ ಹೋಗುವಾಗ ಮುಂದಿನಿಂದ ಗಂಡು ಕೋಣಗಳೂ, ಹಿಂದಿನಿಂದ ಎಮ್ಮೆಗಳೂ ಕರುಗಳೂ ನಡೆಯುವುವು. ಏನಾದರೂ ಆಪತ್ತು ಸಂಭವಿಸಿದಾಗ ಮೊದಲು ಕೋಣಗಳು ಇದಿರಿಸುತ್ತವೆ. ಒಂದು ಕಾಲ ಘಟ್ಟದಲ್ಲಿ, ಐರೋಪಾ, ಏಷ್ಯಾ, ಉತ್ತರ ಅಮೆರಿಕಾ ಖಂಡಗಳಲ್ಲೆಲ್ಲಾ ಈ ಕೋಣಗಳು ತಿರುಗಾಡಿಕೊಂಡಿದ್ದುವು. ಆಗ ಈ ಮೂರು ಖಂಡಗಳನ್ನೂ ಕೂಡಿಸುವ ಭೂ ಭಾಗಗಳಿದ್ದುವು. ಮುಂದೆ ಕಾಲಕ್ರಮದಲ್ಲಿ ಅವು ಜಲಮಯವಾಗಿ, ಜಲಸಂಧಿಗಳಾದುದರಿಂದ, ಕಾಡು ಕೋಣಗಳ ಬರುವಿಕೆ ಹೋಗುವಿಕೆಗಳು ಆಯಾ ಖಂಡಗಳಿಗೇ ಪರಿಮಿತವಾಗಿಹೋದುವು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಜುಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. Natarajan



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಮೇ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಮಾರ್ಚಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಸುಖದಾಯಕವಾದ ಕಾಯಕ

ಎರಡನೇ ಫೋಟೋ: ಭಯದಾಯಕವಾದ ಕಾಯಕ

ಕಳುಹಿಸಿದವರು: ಟಿ. ರಂಗರಾಜನ್, ಸಿ. ಎಂ. ಟಿ. ಎಸ್. ಕಾಲನಿ, ಹುಬ್ಬಳ್ಳಿ

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು.

### ನಿಮಗೆ ಗೊತ್ತೇ? ಉತ್ತರಗಳು:

೧. ಮೆಗಸ್ತನೀಸ್. ೨. ೧೭೫೭ ನೇ ಸಂವತ್ಸರದಲ್ಲಿ ಸಿರಾಜುದ್ದೌಲಾ, ಈಸ್ಟಿಂಡಿಯಾ ಕಂಪನೀ ಸೇನೆಗಳ ನಡುವೆ, ೩. ಐದನೇ ಕಿಂಗ್ ಜಾರ್ಜ್. ೪. ಚೇಸ್. ೫. ಗ್ರೇಟ್ ಬ್ರಿಟನ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.